ಪ್ರಚಾರ ಪುಸ್ತಕಮಾಲೆ 127

# ಭಗವದ್ಗೀತಾ ಸಂದೇಶ

ಸೋಮನಾಥಾನಂದ



ಪ್ರಚಾರ ಪುಸ್ತಕಮಾಲೆ—೧೧೫

# ಭಗವದ್ಗೀತಾ ಸಂದೇಶ

ಸೋಮನಾಥಾನಂದ




೧೯೭೦

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು, ಗಳಿಸಿರುವ

ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದ ವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವ ವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇಧ ಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತ ವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿ ವಿಜ್ಞಾನ, ವೈದ್ಯ ವಿಜ್ಞಾನ, ಗಣಿತ ವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತ ನೂರ ಇಪ್ಪತ್ತಾರು ಪುಸ್ತಕ

ಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀ ಸೋಮನಾಥಾನಂದ ಅವರ 'ಭಗವದ್ಗೀತಾ ಸಂದೇಶ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು
ಅಕ್ಟೋಬರ್ ೩, ೧೯೬೩

**ಸರ್ದಾರ್ ಕೆ. ಎಂ. ಪಣಿಕ್ಕರ್**
ವೈಸ್-ಛಾನ್ಸಲರ್

# ವಿಷಯಸೂಚಿಕೆ


| | | | ಪುಟ |
|---|---|---|---|
| ೧ | ಪ್ರಸ್ತಾವನೆ | ... | ೧ |
| ೨ | ಅರ್ಜುನ ವಿಷಾದ | ... | ೧೨ |
| ೩ | ಶ್ರೀಕೃಷ್ಣನ ಸಮಾಧಾನ | ... | ೧೬ |
| ೪ | ಯಜ್ಞದೃಷ್ಟಿ | ... | ೩೪ |
| ೫ | ಚಾತುರ್ವರ್ಣ್ಯ | ... | ೫೧ |
| ೬ | ಯೋಗಸಮನ್ವಯ | ... | ೫೪ |
| ೭ | ತತ್ತ್ವ ತ್ರಿವೇಣಿ | ... | ೭೩ |
| ೮ | ಅಧಿಕಾರ ವಿಚಾರ ಅನುಭವದ ಸಾಮರಸ್ಯ | ... | ೭೬ |
| ೯ | ಸ್ವಪ್ರಯತ್ನ ಮತ್ತು ಶರಣಾಗತಿ | ... | ೭೮ |
| ೧೦ | ಮುಕ್ತಾಯ | ... | ೮೦ |

# ೧. ಪ್ರಸ್ತಾವನೆ

ಎಲ್ಲಾ ಹಿಂದೂಗಳಿಗೂ ಪರಮಪವಿತ್ರವಾದ ಧರ್ಮಗ್ರಂಥ ಭಗವದ್ಗೀತಾ. ಇದನ್ನು ಬರೆದವರು ಭಗವಾನ್ ವ್ಯಾಸಮಹರ್ಷಿಗಳು. ಇದು ಇರುವುದು ಪಂಚಮವೇದವೆಂದು ಭರತಖಂಡದಲ್ಲಿ ಪ್ರಖ್ಯಾತವಾಗಿರುವ ಮಹಾಭಾರತದ ಭೀಷ್ಮಪರ್ವದಲ್ಲಿ. ಇದರ ನಾಯಕನೇ ಶ್ರೀಕೃಷ್ಣ. ಪೂರ್ಣಾವತಾರನೆಂದು ಎಲ್ಲಾ ಆಚಾರ್ಯರ ಪ್ರೀತಿಗೌರವಗಳಿಗೆ ಪಾತ್ರನಾದವನು. ಭಗವದ್ಗೀತೆಯಲ್ಲಿ ನಮಗೆ ಅರಿವಾಗುವುದು ಸತ್ಯದ ಪೂರ್ಣದೃಷ್ಟಿ. ಇದು ಯಾವುದೋ ಒಂದು ಮೂಲೆಯಿಂದ ನೋಡಿ ಸತ್ಯ ಹೀಗೇ ಇದೆ ಎಂದು ಸಾರುವುದಲ್ಲ. ಇದು ಅದರ ಸುತ್ತಲೂ ನಿಧಾನವಾಗಿ ಪ್ರಯಾಣ ಮಾಡಿ ಒಂದೊಂದು ದೃಷ್ಟಿಕೋಣದಿಂದ ಸತ್ಯ ಹೇಗೆ ಹೇಗೆ ಕಾಣುತ್ತದೆ ಎಂದು ವಿವರಿಸುತ್ತದೆ. ಯಾವುದೋ ಒಂದು ದೃಷ್ಟಿಕೋಣವನ್ನು ಮಾತ್ರ ತೆಗೆದುಕೊಂಡು ಇದೇ ಸತ್ಯ ಎಂದರೆ, ಚಾಮುಂಡಿಬೆಟ್ಟವನ್ನು ಅರಮನೆಯಿಂದ ನೋಡಿ ಹೀಗೆ ಕಾಣುವುದೇ ಚಾಮುಂಡಿಬೆಟ್ಟ ಎಂದಂತೆ ಆಗುವುದು. ಹೌದು, ಅದು ಅರಮನೆಯ ಕಡೆಯಿಂದ ನೋಡಿದರೆ ಹೀಗೆ ಕಾಣುವುದು ಸಹಜ; ಆದರೆ ನಂಜನಗೂಡಿನ ಕಡೆಯಿಂದ ನೋಡಿದರೆ ಮತ್ತೊಂದು ರೀತಿ ಕಾಣುವುದು. ತಿರಮಕೂಡ್ಲು ನರಸೀಪುರದಿಂದ ನೋಡಿದರೆ ಇನ್ನೊಂದು ರೀತಿ ಕಾಣುವುದು. ಯಾವ ದೃಷ್ಟಿ ಇವುಗಳೆಲ್ಲವನ್ನೂ ಸ್ವೀಕರಿಸಿ ಅದಕ್ಕೆ ಒಟ್ಟಿನಲ್ಲಿ ಒಂದು ಸ್ಥಾನವನ್ನು ಕೊಡುವುದೋ ಅದೇ ಪೂರ್ಣದೃಷ್ಟಿ. ಇಂತಹ ಪೂರ್ಣದೃಷ್ಟಿಯ ಅನುಭವ ಆಗುವುದು ನಮಗೆ ಗೀತೆಯಲ್ಲಿ. ಇಲ್ಲಿ ದ್ವೈತ ಇದೆ, ವಿಶಿಷ್ಟಾದ್ವೈತ ಇದೆ, ಅದ್ವೈತ ಇದೆ.

ಇಲ್ಲಿ ಕರ್ಮಯೋಗವಿದೆ, ಜ್ಞಾನಯೋಗವಿದೆ, ಭಕ್ತಿಯೋಗವಿದೆ, ಧ್ಯಾನಯೋಗವಿದೆ. ಇಲ್ಲಿ ದೇವರನ್ನು ನಿರಾಕಾರವಾಗಿ ಉಪಾಸನೆ ಮಾಡುವರಿಗೆ ಸ್ಥಳವಿದೆ. ಸಾಕಾರವಾಗಿ ಉಪಾಸನೆ ಮಾಡು ವವರಿಗೆ ಸ್ಥಳವಿದೆ. ವರ್ಣ, ಆಶ್ರಮ, ಗುರು, ಶಾಸ್ತ್ರ, ಆಚಾರಾ ದಿಗಳಲ್ಲಿ ನಂಬುವವರು ಇದನ್ನು ಗೌರವಿಸುವರು. ಇವನ್ನು ಅಲ್ಲಗಳೆಯುವವರೂ ಗೀತೆಯಲ್ಲಿ ಬರುವ ನಿತ್ಯ ಸತ್ಯವನ್ನು ಗೌರವಿಸುವರು. ಒಂದು ದೃಷ್ಟಿಯಲ್ಲಿ ಗೀತೆಯು ಸಂದೇಶವಷ್ಟು ಆಳವಾಗಿರುವ, ವಿಶಾಲವಾಗಿರುವ ಮತ್ತೊಂದು ಗ್ರಂಥ ಸಿಕ್ಕು ವುದು ಅಪರೂಪ ಜಗತ್ತಿನ ಧರ್ಮಗ್ರಂಥಗಳಲ್ಲಿ. ಇದು ಸನಾತನ ಧರ್ಮಕ್ಕೆ ಇರುವ ಸನಾತನ ತಳಹದಿ.

ಹಿಂದೂದರ್ಶನ ಮೂಲವಾಗಿ ಮೂರು ಪ್ರಸ್ಥಾನಗಳ ಮೇಲೆ ನಿಲ್ಲುವುದು. ಅವೇ ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆ. ಈ ಮೂರು ಗ್ರಂಥಗಳಲ್ಲಿ ಗೀತೆ ಉಳಿದೆರಡ ಕ್ಕಿಂತಲೂ ಏತಕ್ಕೆ ಮೇಲು ಎಂಬುದನ್ನು ಇಲ್ಲಿ ಸ್ವಲ್ಪ ವಿಚಾರಿಸುವ. ಉಪನಿಷತ್ತುಗಳು ವೇದಗಳಲ್ಲಿ ಬರುತ್ತವೆ. ವೇದಗಳನ್ನು ಹಿಂದಿನ ಕಾಲದಿಂದಲೂ ಎಲ್ಲರೂ ಓದುವುದಕ್ಕೆ ಅಧಿಕಾರಿಗಳಲ್ಲ ಎಂದು ಸಾರಿದ್ದರು. ಅದಕಾರಣ ಎಲ್ಲರೂ ಉಪನಿಷತ್ತನ್ನು ಓದುವುದಕ್ಕೆ ಅವಕಾಶ ಸಿಕ್ಕುತ್ತಿರಲಿಲ್ಲ. ಹಾಗೆ ಹಿಂದಿನ ಕಾಲ ದವರು ಉಪನಿಷತ್ತಿನ ಸುತ್ತಲೂ ಒಂದು ಬೇಲಿಯನ್ನು ಹಾಕಿ, ಯಾರೋ ಕೆಲವರನ್ನು ಒಳಗೆ ಬಿಟ್ಟು ಉಳಿದವರನ್ನು ತಡೆಯುವುದಕ್ಕೆ ಅವರೊಂದು ಕಾರಣವನ್ನು ಕೊಡುವರು. ಆ ಕಾರಣ ಈಗ ಎಷ್ಟುಮಟ್ಟಿಗೆ ಸಾಧು ಎಂಬುದನ್ನು ವಿಚಾರಿಸುವ ಗೋಜಿಗೆ ಹೋಗಬೇಕಾಗಿಲ್ಲ. ಅವರು ಕೊಡುವ ಕಾರಣವೇ ಇದು: ಉಪನಿಷತ್ತನ್ನು ಓದಿ ತಿಳಿದುಕೊಳ್ಳಬೇಕಾದರೆ ಬಲ್ಬಿನ ಬುದ್ಧಿ

ಬಹಳ ಮೊನಚಾಗಿರಬೇಕು. ಹೃದಯ ಶುದ್ಧವಾಗಿರಬೇಕು, ಇಂದ್ರಿಯಗಳನ್ನು ಸಂಯಮ ಮಾಡಿರಬೇಕು. ಅಂತಹವನು ಇದನ್ನು ಓದಿದರೆ ಅರ್ಥವಾಗುವುದೇ ಹೊರತು, ಅಶಾಂತಿ, ಇಂದ್ರಿಯ ಚಪಲ, ದುರ್ನಡತೆಗಳಿಗೆ ದಾಸನಾಗಿಟ್ಟವನು ಇದನ್ನು ತಿಳಿದುಕೊಳ್ಳಲಾರ. ಕೆಲವು ವೇಳೆ ಅದನ್ನು ಓದಿ ತಿಳಿದೆ ಎಂದು ಭಾವಿಸಿದರೆ ಮುಕ್ಕಾಲುಪಾಲು ಅವನು ಅದನ್ನು ತಪ್ಪು ತಿಳಿದುಕೊಂಡಿರುವನು. ಒಂದು ಗಹನ ಸತ್ಯವನ್ನು ಸರಿಯಾಗಿ ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗದೇ ಇದ್ದರೆ ತಿಳಿದು ಕೊಳ್ಳದೇ ಇರುವುದೇ ಮೇಲು. ತಿಳಿದುಕೊಳ್ಳದೇ ಇದ್ದರೆ ಅವನು ಬರೀ ಅಜ್ಞಾನಿ ಮಾತ್ರ. ಅವನಿಂದ ಪ್ರಪಂಚಕ್ಕೆ ಹೆಚ್ಚು ನಷ್ಟವಿಲ್ಲ. ತಪ್ಪು ತಿಳಿದುಕೊಂಡವನು ತಾನು ಕೆಡುವು ದಲ್ಲದೇ ಸುತ್ತಮುತ್ತಲಿರುವವರನ್ನೆಲ್ಲ ಕೆಡಿಸುವನು. ಏನೂ ತಿಳಿಯದೇ ಇರುವುದಕ್ಕಿಂತ ಸ್ವಲ್ಪವಾದರೂ ತಿಳಿದುಕೊಂಡಿರು ವುದು ಮೇಲು ಎಂಬ ವಾದವಿದೆ. ಇದು ಲೌಕಿಕ ಜ್ಞಾನಕ್ಕೆ ಸರಿಯಾಗಬಹುದು. ಆದರೆ ಪರಮಾರ್ಥದಲ್ಲಿ ಅಲ್ಪ ತಿಳಿವಳಿಕೆ ಭಯಾನಕವಾದ ತಿಳಿವಳಿಕೆ. ಈಗತಾನೆ ಮೋಟಾರುಕಾರನ್ನು ನಡೆಸುವವನ ಕಾರಿನೊಳಗೆ ಕುಳಿತು ದೂರಪ್ರಯಾಣವನ್ನು ಮಾಡಲು ಯತ್ನಿಸಿದಂತೆ. ನಡೆಯುವುದಕ್ಕಿಂತ ಕಾರಿನಲ್ಲಿ ಹೋಗು ವುದು ಮೇಲು ಎಂದು ಭಾವಿಸಬಹುದು. ಕಾರಿನಲ್ಲಿ ಹೋಗಿ ಪ್ರಾಣ ಕಳೆದುಕೊಳ್ಳುವುದಕ್ಕಿಂತ ನಿಧಾನವಾದರೂ ಚಿಂತೆಯಿಲ್ಲ, ನನ್ನ ಕಾಲಮೇಲೆ ಹೋಗುತ್ತೇನೆ ಎಂದು ಹಲವರು ಹೇಳುವರು.

ಭಗವದ್ಗೀತೆ ಇರುವುದು ಪಂಚಮವೇದವೆಂದು ಪ್ರಖ್ಯಾತ ವಾದ ಮಹಾಭಾರತದಲ್ಲಿ. ಇದನ್ನು ಓದುವುದಕ್ಕೆ ಇಂತಹವರೇ ಅರ್ಹರು. ಇಂತವರೇ ಅನರ್ಹರು ಎಂಬ ನಿಯಮವೇನೂ

ಇಲ್ಲ. ಇಲ್ಲಿ ವಿಷಯಗಳನ್ನು ಬಹಳ ಸುಲಭವಾಗಿ ಶ್ರೀ ಕೃಷ್ಣ ಹೇಳುವನು. ಉಪನಿಷತ್ತಿನ ಸಾರವನ್ನೇ ಶ್ರೀಕೃಷ್ಣ ಮಾನವ ಕೋಟಿಯಮೇಲೆ ಕರುಣೆ ತಾಳಿ ಎಲ್ಲರೂ ತಿಳಿದುಕೊಳ್ಳುವಂತಹ ಸುಲಭರೀತಿಯಲ್ಲಿ ಹೇಳುವನು. ಆದಕಾರಣವೇ ಗೀತೆಯ ಧ್ಯಾನ ಶ್ಲೋಕಗಳಲ್ಲಿ "ಸರ್ವ ಉಪನಿಷತ್ತುಗಳೇ ಗೋವು. ಅದನ್ನು ಕರೆದವನು ಶ್ರೀಕೃಷ್ಣ. ಆ ಹಾಲೇ ಗೀತೆ" ಎಂದು ಇದೆ. ಹಾಲು ಎಲ್ಲರಿಗೂ ಬೇಕು. ಎಲ್ಲರಿಗೂ ಪುಷ್ಟಿಕಾರಿ. ತಾಯಿಯ ತೊಡೆಯ ಮೇಲೆ ಇರುವ ಮಗುವಿಗೆ ಹಾಲು ಬೇಕು. ದೊಡ್ಡ ಜೆಟ್ಟಿಗೂ ಹಾಲು ಬೇಕು. ಆರೋಗ್ಯವಂತನಿಗೆ ಬೇಕು. ಅದಕ್ಕಿಂತ ಹೆಚ್ಚಾಗಿ ಅನಾರೋಗ್ಯದಿಂದ ದುರ್ಬಲನಾದವನಿಗೆ ಬೇಕು. ಸ್ತ್ರೀ ಶೂದ್ರ ವೈಶ್ಯ ಚಂಡಾಲರೆಲ್ಲರೂ ಗೀತೆಯ ಅಮೃತವನ್ನು ಉಂಡು ಧನ್ಯರಾಗಲಿ ಎಂದೇ ಶ್ರೀಕೃಷ್ಣ ಇದನ್ನು ಅರ್ಜುನನನ್ನು ನಿಮಿತ್ತವಾಗಿ ಮಾಡಿಕೊಂಡು ಜಗತ್ತಿಗೆ ಸಾರಿರುವುದು.

ಇನ್ನು ಪ್ರಸ್ಥಾನತ್ರಯದ ಎರಡನೆಯದಾದ ಬ್ರಹ್ಮಸೂತ್ರ. ಇಲ್ಲಿ ಇರುವುದಾದರೋ ಸೂತ್ರಪ್ರಾಯವಾದ ಸಣ್ಣ ಸಣ್ಣ ವಾಕ್ಯಗಳು. ಇವುಗಳನ್ನೆಲ್ಲ ಉಪನಿಷತ್ತಿನಿಂದ ತಂದು ಜೋಡಿಸಿರುವರು. ಸೂತ್ರಗಳನ್ನು ಆಯಾ ಉಪನಿಷತ್ತಿನ ಹಿನ್ನೆಲೆಯಲ್ಲಿ ಓದಿದರೇ ಅರ್ಥವಾಗುವುದು ಕಷ್ಟ. ಅದನ್ನು ಅಲ್ಲಿಂದ ತಂದು ಬ್ರಹ್ಮಸೂತ್ರದಲ್ಲಿ ಜೋಡಿಸಿದಾಗ ಅದು ಅರ್ಥವಾಗುವುದು ಮತ್ತೂ ಕಷ್ಟ. ಅದಕ್ಕೆ ಭಾಷ್ಯವನ್ನು ಬರೆದ ಯಾವುದಾದರೂ ಸಂಪ್ರದಾಯಕ್ಕೆ ಸೇರಿದ ಆಚಾರ್ಯರ ಸಹಾಯವಿಲ್ಲದೇ ಇದ್ದರೆ. ಅದನ್ನು ಅರ್ಥ ಮಾಡಿಕೊಳ್ಳುವುದು ದುಸ್ಸಾಧ್ಯ. ಗೀತೆಯನ್ನು ಓದಿ ತಿಳಿದುಕೊಳ್ಳಬೇಕಾದರೆ ಈ ಕಸರತ್ತು ಬೇಕಿಲ್ಲ. ಪ್ರತಿಯೊಬ್ಬನೂ ತನ್ನ ಯೋಗ್ಯತೆಗೆ ತಕ್ಕಂತೆ ಇಲ್ಲಿ ತಿಳಿದುಕೊಳ್ಳಬಲ್ಲ. ದೊಡ್ಡ

ಪಾತ್ರೆ ತೆಗೆದುಕೊಂಡು ಹೋದರೆ ಹೆಚ್ಚು ಸಿಕ್ಕುವುದು, ಸಣ್ಣ ಪಾತ್ರೆ ತೆಗೆದುಕೊಂಡು ಹೋದರೆ ಕಡಿಮೆ ಸಿಕ್ಕುವುದು. ಯಾವ ಪಾತ್ರೆಯನ್ನು ತೆಗೆದುಕೊಳ್ಳದೇ ಹೋದರೂ ಕೈಯಿಂದ ನೀರನ್ನು ತೆಗೆದುಕೊಂಡು ತಾತ್ಕಾಲಿಕವಾಗಿಯಾದರೂ ಬಾಯಾರಿಕೆಯಿಂದ ತೃಪ್ತರಾಗಬಹುದು. ತನ್ನೆಡೆಗೆ ಬಂದ ಯಾರನ್ನೂ ಗೀತೆ ಹಾಗೆಯೇ ಕಳುಹಿಸುವುದಿಲ್ಲ. ಅವರವರಿಗೆ ಏನನ್ನು ತಿಳಿದು ಕೊಳ್ಳಲು ಸಾಧ್ಯವೋ ಏಷ್ಟನ್ನು ಅರಗಿಸಿಕೊಳ್ಳಲು ಸಾಧ್ಯವೋ ಅಷ್ಟನ್ನು ಕೊಟ್ಟು ಕಳುಹಿಸುವುದು.

ಆದಕಾರಣವೇ ಭಗವದ್ಗೀತೆ ಎಲ್ಲದಕ್ಕಿಂತ ಓದಿ ತಿಳಿದು ಕೊಳ್ಳುವುದು ಸುಲಭ. ಶ್ರೀ ಶಂಕರಾಚಾರ್ಯರು ಗೀತೆಯಮೇಲೆ ಭಾಷ್ಯವನ್ನು ಬರೆಯುವಾಗ 'ಸಮಸ್ತ ವೇದಾರ್ಥಸಾರ ಸಂಗ್ರಹ ಭೂತಂ'. 'ತದರ್ಥ ವಿಜ್ಞಾನೇ ಸಮಸ್ತ ಪುರುಷಾರ್ಥ ಸಿದ್ಧಿಃ' ಎಂದು ಹೇಳುವರು. ಭಗವದ್ಗೀತೆಯಲ್ಲಿ ಸಕಲ ವೇದಗಳ ಅರ್ಥದ ಸಾರಸಂಗ್ರಹವಿದೆ. ಇದನ್ನು ತಿಳಿದು ಕೊಂಡವನಿಗೆ ಧರ್ಮ, ಅರ್ಥ, ಕಾಮ, ಮೋಕ್ಷಗಳು ಲಭಿಸುವುವು. ಇಹಪರ ಎರಡಕ್ಕೂ ನಮಗೆ ಒಳ್ಳೆಯದನ್ನು ಮಾಡುವ ಗ್ರಂಥ ಇದು.

ಭಗವದ್ಗೀತೆ ಮಹಾಭಾರತದ ಮಧ್ಯದಲ್ಲಿ ಬರುವ ಭೀಷ್ಮ ಪರ್ವದಲ್ಲಿದೆ. ಸುಮಾರು ೭೦೦ ಶ್ಲೋಕಗಳನ್ನೊಳಗೊಂಡಿದೆ. ಹದಿನೆಂಟು ಅಧ್ಯಾಯಗಳಲ್ಲಿ ವಿಭಾಗವಾಗಿದೆ. ಪ್ರತಿಯೊಂದು ಅಧ್ಯಾಯವೂ "ಇತಿ ಶ್ರೀಮತ್ ಭಗವದ್‌ಗೀತಾಸು, ಉಪನಿಷತ್ಸು, ಬ್ರಹ್ಮವಿದ್ಯಾಯಾಂ, ಯೋಗಶಾಸ್ತ್ರೇ, ಶ್ರೀ ಕೃಷ್ಣಾರ್ಜುನ ಸಂವಾದೇ" ಎಂದು ಕೊನೆಗೊಳ್ಳುವುದು. ಇದು ಭಗವದ್ಗೀತೆ ಅವರೂ ಇದರ ಪ್ರತಿಯೊಂದು ಅಧ್ಯಾಯವೂ ಉಪ ನಿಷತ್ತಿಗೆ ಸಮ. ಇಲ್ಲಿರುವುದು ಶ್ರೀಕೃಷ್ಣನಂತಹ ಗುರುವಿನ

ಸಮೀಪದಲ್ಲಿ ಕುಳಿತು ಕೇಳಿದ ಜ್ಞಾನ. ಹೇಗೆ ಉಪನಿಷತ್ತು ವೇದಗಳ ಶಿರಸ್ಸೋ ಮತ್ತು ತತ್ತ್ವಪ್ರಪಂಚದಲ್ಲಿ ಪ್ರಖ್ಯಾತ ವಾಗಿದೆಯೋ, ಹಾಗೆಯೇ ಗೀತೆಯು ಪ್ರತಿಯೊಂದು ಅಧ್ಯಾಯವು. ಇಲ್ಲಿ ಇರುವುದು ಬ್ರಹ್ಮವಿದ್ಯೆ. ಯಾವುದನ್ನು ಶ್ರೀಕೃಷ್ಣ ವಿದ್ಯೆಗಳಲ್ಲೆಲ್ಲ ಅಧ್ಯಾತ್ಮವಿದ್ಯೆ ನಾನು ಎನ್ನುವನೋ, ಆ ಬ್ರಹ್ಮ ವಿದ್ಯೆಯನ್ನು ಇಲ್ಲಿ ಬೋಧಿಸಿ ಅರ್ಜುನನ ಅಜ್ಞಾನವನ್ನು ನಿವಾರಿಸುವನು. ಇದು ಯೋಗಶಾಸ್ತ್ರ. ಅಂದರೆ, ಅನುಷ್ಠಾನ ಮಾಡಲು ಯೋಗ್ಯವಾಗಿರುವುದು. ಇದು ಬರೀ ಒಣತತ್ತ್ವವಲ್ಲ. ಜೀವನದಲ್ಲಿ ಹಾಸುಹೊಕ್ಕಾಗಬಲ್ಲಂತಹ ವಿದ್ಯೆ. ದೇವರಿಂದ ವಿಯೋಗವಾಗಿ ಸಂಸಾರಕಾನನದಲ್ಲಿ ಅಲೆಯುತ್ತಿರುವ ತಬ್ಬಲಿ ಯಾದ ಜೀವಿಯನ್ನು ದೇವರೊಂದಿಗೆ ಯೋಗದ ಮೂಲಕ ಸಂಬಂಧವನ್ನು ಬೆಳೆಸುವುದು ಇಲ್ಲಿರುವುದು. ಇಲ್ಲಿ ವಿಷಯವನ್ನು ಹೇಳುವ ರೀತಿ ಸಂವಾದರೂಪವಾದುದು. ಶಿಷ್ಯ ಗುರುವಿನ ಮುಂದೆ ತನ್ನ ಅನುಮಾನವನ್ನು ಇಡುವನು. ಗುರು ಅದನ್ನು ಬಿಡಿಸುವನು. ಆದಕಾರಣ ಸಂಬಂಧ ನಿಕಟವಾಗಿದೆ. ಇದು ಬಹಿರಂಗ ಸಭೆಯೊಂದರಲ್ಲಿ ಕೊಡುವ ಉಪನ್ಯಾಸದಂತೆ ಇಲ್ಲ. ಪ್ರಶಾಂತವಾದ ಸ್ಥಳದಲ್ಲಿ ಕುಳಿತುಕೊಂಡು ಶಿಷ್ಯ ಗುರುವನ್ನು ಪ್ರಶ್ನಿಸುತ್ತಿರುವನು. ಆದಕಾರಣ ಇದು ಸಹಜವಾದ ಆತ್ಮೀಯ ವಾದ ಸಂಬಂಧ. ಶಿಷ್ಯ ತಾನೊಬ್ಬನೆ ಗುರುವಿನ ಬಳಿ ಇರುವಾಗ ಯಾವ ಪ್ರಶ್ನೆಯನ್ನಾದರೂ ಕೇಳುವುದಕ್ಕೆ ಹಿಂದೆಗೆಯುವುದಿಲ್ಲ. ಗುರುವಾದರೋ ಶಿಷ್ಯನ ಸಂದೇಹವನ್ನು ಯಾವ ಕಾಲಾವಸರವೂ ಇಲ್ಲದೆ, ಆಮೂಲಾಗ್ರವಾಗಿ ಹೋಗಲಾಡಿಸಲು ಪ್ರಯತ್ನಿಸು ವನು. ಇಲ್ಲಿ ಅರ್ಜುನ ಕೇಳುವ ಪ್ರಶ್ನೆಗಳು ಕೇವಲ ಅರ್ಜುನನಿಗೆ ಮಾತ್ರ ಸಂಬಂಧಪಟ್ಟುದಲ್ಲ. ಅತ ನಮ್ಮೆಲ್ಲರ ಪ್ರತಿನಿಧಿ. ನಮ್ಮ

ಮನಸ್ಸಿನಲ್ಲಿ ಯಾವ ಯಾವ ಪ್ರಶ್ನೆಗಳು ಉದಿಸಬಹುದೊ ಅವುಗಳನ್ನೇ ಸಮಂಗಾಗಿ ಅವನು ಕೇಳುತ್ತಿರುವಂತಿದೆ. ಇಂತಹ ಒಂದು ಸಹಜ ಸ್ವಭಾವದ ವಾತಾವರಣದಲ್ಲಿ ಹುಟ್ಟಿದ ಆಧ್ಯಾತ್ಮಿಕ ಗ್ರಂಥ ಗೀತೆ.

ಭಗವದ್ಗೀತೆ ಭೀಷ್ಮಪರ್ವದಲ್ಲಿ ಅಂತರ್ಗತವಾಗಿದ್ದರೂ ಗೀತೆ ಯನ್ನು ಯಾರೋ ಅನಂತರ ಬರೆದು ಬಳಕೆಯಲ್ಲಿದ್ದ ಮಹಾ ಭಾರತಕ್ಕೆ ಸೇರಿಸಿರುವರು ಎಂಬ ವಾದವನ್ನು ಕೆಲವು ವಿಮರ್ಶಕರು ತರುವರು. ಅದಕ್ಕೆ ಕಾರಣಗಳು ಇವು: ಯುದ್ಧಕ್ಕೆ ಸನ್ನದ್ಧನಾಗಿ ಬರುವ ಅರ್ಜುನನಿಗೆ ಆಗಲೇ ಗೊತ್ತಿತ್ತು ಯಾರಮೇಲೆ ಯುದ್ಧ ಮಾಡಬೇಕಾಗಿತ್ತು ಎನ್ನುವುದು. ಅವರನ್ನು ಯುದ್ಧರಂಗದಲ್ಲಿ ನೋಡಿದಾಗ ವೈರಾಗ್ಯ ಬರುವುದು; ಶ್ರೀಕೃಷ್ಣನು ನಿಧಾನವಾಗಿ ಏಳುನೂರು ಶ್ಲೋಕಗಳಿಂದ ಕೂಡಿದ ಗೀತೆಯ ಮೂಲಕ ನಿವಾರಿಸುವುದು ಅಸಂಗತವಾಗಿ ಕಾಣುವುದು. ಇದಕ್ಕೆ ಪರಿಹಾರ ವನ್ನು ನಾವು ಈ ರೀತಿ ಕೊಡಬಹುದು. ಅರ್ಜುನನಿಗೆ ಮುಂಚೆಯೇ ಗೊತ್ತಿತ್ತು ಯಾರಮೇಲೆ ಯುದ್ಧ ಮಾಡಬೇಕಾಗಿದೆ, ಯಾರನ್ನು ಕೊಲ್ಲಬೇಕಾಗಿದೆ ಎಂಬುದು. ಗೊತ್ತಿರುವುದು ಬೇರೆ, ಆ ಕಾರ್ಯವನ್ನು ಮಾಡಲು ಹೋಗುವಾಗ ನಮ್ಮ ಮನಸ್ಸಿನಲ್ಲಿ ಏಳುವ ಭಾವನೆಗಳು ಬೇರೆ. ಎಷ್ಟೋ ಜನ ಸ್ಥಿರಸಂಕಲ್ಪಮಾಡಿ ಕೆರೆಗೊ ಭಾವಿಗೊ ಬಿದ್ದು ಆತ್ಮಹತ್ಯ ಮಾಡಿಕೊಳ್ಳಲು ನೀರಿನ ತನಕ ನಡೆದುಕೊಂಡು ಹೋಗಿ ಬೀಳದೆ ಮನೆಗೆ ಹಿಂತಿರುಗಿರು ವರು! ಅಂತಹವರೇ ಜಾಸ್ತಿ. ಆತ್ಮಹತ್ಯೆಯಲ್ಲೇ ಪರ್ಯವಸಾನ ವಾಗಿರುವುದು ಎಲ್ಲೋ ನೂರಕ್ಕೆ ಒಂದು ಇರಬಹುದು. ಬಹುಶಃ ನಾವೆಲ್ಲ ಆ ತೊಂಬತ್ತೊಂಬತ್ತು ಮಂದಿಯ ಗುಂಪಿಗೆ ಸೇರಿರ ಬಹುದು. ಒಂದು ಕೆಲಸವನ್ನು ಮಾಡುತ್ತೇನೆ ಎಂದು ಸಂಕಲ್ಪ

ಮಾಡುವುದು ಒಂದು. ನಾವು ಆ ಕಾರ್ಯವನ್ನು ಇನ್ನೇನು ಮಾಡುವುದರಲ್ಲಿ ಉದ್ಯುಕ್ತರಾಗಿರುವಾಗ ನಾವು ಊಹಿಸದೆಯೂ ಇರತಕ್ಕ ಭಾವನೆಗಳು ಆಗ ಬರಬಹುದು. ಅದರಂತೆಯೇ ಅರ್ಜುನನ ಮನಸ್ಸಿನಲ್ಲಿ ಏಳುವ ಅನುಕಂಪ. ಸೇಡನ್ನು ತೀರಿಸಿ ಕೊಳ್ಳುವುದಕ್ಕೆ ಅರ್ಜುನ ಬಂದಿರುವನು. ಆಗ ವೈರಾಗ್ಯ ಬಂತು ಅವನ ಮನಸ್ಸಿನಲ್ಲಿ ಎನ್ನುವುದು ಕೃತಕ ಎನ್ನುವವರಿಗೂ ಮೇಲಿನ ತರಹ ಸಮಾಧಾನವನ್ನೇ ಕೊಡಬಹುದು. ವೈರಾಗ್ಯ ಇಂತಹ ಸಮಯದಲ್ಲೆ ಬರಬೇಕು, ಇಂತಹ ಸಮಯದಲ್ಲಿ ಬರಬಾರದು ಎಂಬ ನಿಯಮವಿಲ್ಲ. ಸಾಧಾರಣವಾಗಿ ವೈರಾಗ್ಯ ಹುಟ್ಟುವುದು ಪ್ರಪಂಚದ ಕ್ಷಣಿಕತ್ವ ನಮಗೆ ಗೊತ್ತಾದಾಗ. ಸಾವು–ನೋವು —ಅಂಗಹೀನರ ಆರ್ತನಾದ–ವಿಧವೆಯರ ತಾಯಂದಿರ ಗೋಳು. ಅತಿರಥ ಮಹಾರಥರು ಕ್ಷಣಾರ್ಧದಲ್ಲಿ ಮಂಗಮಾಯವಾಗುವುದು ಇವುಗಳೆಲ್ಲ ಒಬ್ಬನ ಮೇಲೆ ವೈರಾಗ್ಯಭಾವವನ್ನು ಬರುವಂತೆ ಮಾಡದೇ ಇದ್ದರೆ ಇನ್ನಾವುದು ಮಾಡಬಲ್ಲದು? ದಾರಿಯಲ್ಲಿ ಹೋಗುತ್ತಿರುವಾಗ ನಾವು ಒಂದು ಹೆಣವನ್ನು ನೋಡಿದರೇ 'ಅಯ್ಯೋ ನಮ್ಮ ಬಾಳೇ ಇದು' ಎಂಬ ವೈರಾಗ್ಯದ ಉದ್ಗಾರ ಎಂತಹ ಭಂಡನಿಂದಲೂ ಬರುವುದು. ಹೀಗಿರುವಾಗ ಇನ್ನು ಸ್ವಲ್ಪ ಹೊತ್ತಿನಲ್ಲಿ ಕುರುಕ್ಷೇತ್ರ ಹೆಣಗಳ ರಾಶಿಯಿಂದ ತುಂಬಿಹೋಗುವುದು ಎಂಬುವನ್ನು ಅರಿತೂ ವೈರಾಗ್ಯ ಬರದೇ ಇದ್ದರೆ ಅದು ಕೃತಕ, ಬರುವುದು ಸಹಜ.

ಅಷ್ಟು ನಿಧಾನವಾಗಿ ಶ್ರೀಕೃಷ್ಣ ಉತ್ತರ ಹೇಳುವುದಕ್ಕೆ ಆಗ ಸಮಯವೆಲ್ಲಿತ್ತು ಎಂಬ ಮತ್ತೊಂದು ಆಕ್ಷೇಪಣೆಗೆ ಉತ್ತರ ಇದು: ಶ್ರೀಕೃಷ್ಣ ನಮಗೆ ಗೀತೆಯಲ್ಲಿ ಬರೆದಿರುವ ಶ್ಲೋಕಗಳ ಮೂಲಕವೇ ಅರ್ಜುನನಿಗೆ ಉತ್ತರ ಕೊಟ್ಟನು ಎಂದು ಭಾವಿಸ

ಬೇಕಾಗಿಲ್ಲ. ಶ್ರೀಕೃಷ್ಣ ಅರ್ಜುನನ ಸಂದೇಹಗಳನ್ನು ಕೆಲವು ಮಾತಿನಲ್ಲಿ ಸಂಕ್ಷೇಪವಾಗಿ ಹೇಳಿರಬಹುದು. ವ್ಯಾಸರು ಅದನ್ನು ನಂತರ ಬರೆಯುವಾಗ ಮಾನವರಿಗೆ ಚೆನ್ನಾಗಿ ಅರ್ಥವಾಗಲಿ ಎಂದು ವಿವರವಾಗಿ ದೀರ್ಘವಾಗಿ ಬರೆದಿರುವರು. ಈ ಸಂದರ್ಭ ದಲ್ಲಿ ಗೀತೆಯ ಪ್ರಸಿದ್ಧ ಟೀಕಾಕಾರರಾದ ಶ್ರೀಧರಸ್ವಾಮಿಗಳು ತಮ್ಮ ಪ್ರಸ್ತಾವನೆಯಲ್ಲಿ ಹೇಳಿರುವ ಮಾತು ಅತ್ಯಂತ ಮನೋಜ್ಞ ವಾಗಿದೆ. 'ಭಗವಂತನು ಉಪದೇಶಿಸಿದ ವಿಷಯವನ್ನೇ ಕೃಷ್ಣ ದ್ವೈಪಾಯನರು ಏಳುನೂರು ಶ್ಲೋಕಗಳಲ್ಲಿ ಬರೆದರು...ಸಂಬಂಧ ವನ್ನು ಸೂಚಿಸುವುದಕ್ಕೋಸ್ಕರ ಅಲ್ಲಲ್ಲಿ ತಮ್ಮ ಶ್ಲೋಕಗಳನ್ನೂ ಸೇರಿಸಿದರು'.

ಶೈಲಿಯ ರೀತಿಯಿಂದ ನೋಡಿದರೆ ಮಹಾಭಾರತದಲ್ಲಿ ಮತ್ತು ಗೀತೆಯಲ್ಲಿ ಒಂದೇ ಕವಿಯ ಕೈವಾಡವನ್ನು ನೋಡ ಬಹುದು ಎಂದು ಬಾಲಗಂಗಾಧರ ತಿಲಕರ ಅಭಿಪ್ರಾಯ. ಗೀತೆ ಯನ್ನು ಬಿಟ್ಟರೆ ಮಹಾಭಾರತಕ್ಕೆ ಕಳೆಯಿಲ್ಲ; ಬೆಲೆಯಿಲ್ಲ. ಅದ ಕಾರಣವೇ ಹಿಂದಿನವರು ಗೀತೆಯನ್ನು ಕುರಿತು.

'ಮಹಾಭಾರತ ತೈಲಪೂರ್ಣಃ ಪ್ರಜ್ವಾಲಿತೋ ಜ್ಞಾನಮಯ ಪ್ರದೀಪಃ' ಎಂದು ಹೇಳಿರುವುದು. ಇಡೀ ಮಹಾಭಾರತ ಗೀತೆಯಲ್ಲಿ ಬರುವ ತತ್ತ್ವಜ್ಯೋತಿಯನ್ನು ಪೋಷಿಸುವುದಕ್ಕೆ ಇರುವ ತೈಲದಂತೆ.

ಪ್ರಪಂಚದಲ್ಲಿ ಮತ್ತಾವ ಆಧ್ಯಾತ್ಮಿಕ ಗ್ರಂಥವೂ ಇಷ್ಟು ನಾಟಕೀಯವಾಗಿ ಆರಂಭವಾಗುವುದಿಲ್ಲ. ಗೀತಾ ಸಂದೇಶ ಪ್ರಾರಂಭವಾಗುವುದಕ್ಕಾಗಿಯೇ ಭಾರತಯುದ್ಧವೆಂಬ ಹಿನ್ನಲೆ ಸೃಷ್ಟಿಯಾದಂತೆ ಇದೆ. ಇದೊಂದು ಗುರು ಶಿಷ್ಯರಿರುವ ನಿರ್ಜನ

ಪ್ರದೇಶವಲ್ಲ, ಅರಣ್ಯವಲ್ಲ, ಗಿರಿಗುಹೆಯಲ್ಲ. ವೀರರ ಗರ್ಜನೆ ಯಿಂದ ರಣರಣಿತವಾಗಿರುವ ಕುರುಕ್ಷೇತ್ರವೇ ಇದು.

ಪಾಂಡವ ಕೌರವರ ಅಪಾರ ಸೇನಾಸಾಗರ ಕುರುಕ್ಷೇತ್ರದಲ್ಲಿ ಕಾದಲನುವಾಗಿ ನಿಂತಿದೆ. ಪಾಂಡವರು ಬಾಲ್ಯದಿಂದಲೂ ಕೌರವನ ಕುಟಿಲ ತಂತ್ರಗಳಿಗೆ ಒಳಗಾಗಿ, ಬೆಂದು ನೊಂದು ಅವಮಾನ ಹೊಂದಿ, ಕೌರವರಿಂದ ತಮಗೆ ಬರಬೇಕಾದ ರಾಜ್ಯವನ್ನು ಬೇಡಿ ನಿರಾಶರಾಗಿ, ಶರದ ಮೊನೆಯಲ್ಲಿ ಕಾದಿದಲ್ಲದೆ ಬೇಡಿದರೆ ದೊರಕು ವುದಿಲ್ಲವೆಂದು ಅತಿರಥ ಮಹಾರಥರನ್ನು ಒಳಗೊಂಡ ಏಳು ಅಕ್ಷೋಹಿಣಿ ಸೈನ್ಯದೊಂದಿಗೆ ಯುದ್ಧಮಾಡುವುದಕ್ಕಾಗಿ ಕುರು ಕ್ಷೇತ್ರಕ್ಕೆ ಬಂದಿರುವರು. ಪ್ರಳಯ ಮೊದಲಾಗುವುದಕ್ಕೆ, ಯಮನ ಸೂರೆಗೆ, ದ್ವಾಪರಯುಗದ ಶ್ರೇಷ್ಠತಮ ವ್ಯಕ್ತಿಗಳ ಬಹುಪಾಲು ಅವ್ಯಕ್ತದ ಗೋರಿಗೆ ಸಾಗಿಹೋಗುವುದಕ್ಕೆ ಕಾಲ ಸ್ವಲ್ಪ ಉಳಿದಿದೆ. ಅರ್ಜುನನು ಶ್ರೀಕೃಷ್ಣನನ್ನು ಸಾರಥಿಯಾಗಿ ಮಾಡಿಕೊಂಡು ಎರಡು ಸೈನ್ಯಗಳ ಮಧ್ಯದಲ್ಲಿ ತನ್ನ ರಥವನ್ನು ನಿಲ್ಲಿಸುವನು. ಯಾರ ಮೇಲೆ ಯುದ್ಧಮಾಡಬೇಕೆಂದು ಬಂದಿರುವನೊ ಅವರನ್ನು ಅರ್ಜುನ ಒಮ್ಮೆ ನೋಡಬೇಕೆಂದು ಬಯಸುವನು. ಯಾರ ತೊಡೆಯ ಮೇಲೆ ತಮ್ಮ ಬಾಲ್ಯವನ್ನು ಕಳೆದರೊ, ಯಾರ ಆಶ್ರಯದಿಂದ, ಹರಕೆಯ ಬಲದಿಂದ, ಯುವಕರಾಗಿ ಬಲಾಢ್ಯರಾಗಿ ಪ್ರಖ್ಯಾತ ಬಿಲ್ಲಾಳುಗಳಾದರೊ ಅಂತಹ ಕುರುಪಿತಾಮಹ ಭೀಷ್ಮನೇ ಸೈನ್ಯಕ್ಕೆ ಅಧಿಪತಿಯಾಗಿರುವನು. ಅತ್ತಕಡೆ ತನಗೆ ಧನುರ್ವಿದ್ಯೆಯ ದೀಕ್ಷೆಕೊಟ್ಟು, ಜಗತ್ರಯದಲ್ಲಿ ಅಸೀಮ ಸಾಹಸಿ ಯನ್ನಾಗಿ ಮಾಡಿ, ತನ್ನ ಪುತ್ರ ಮಗನಾದ ಅಶ್ವತ್ಥಾಮನಿಗಿಂತ ಹೆಚ್ಚು ಪ್ರೀತಿಸುತ್ತಿದ್ದ ಗುರುವರ್ಯ ದ್ರೋಣಾಚಾರ್ಯರು ಇರುವರು. ಅಕ್ಕಪಕ್ಕದಲ್ಲಿ ಒಂದೇ ವಂಶದ ತರುಣರಿಂದ ಕವಲೊಡೆದ

ದಾಯಾದಿಗಳು, ಬಂಧುಗಳು, ಮಿತ್ರರು ಮುಂತಾದವರು ಇರುವರು. ಇವರನ್ನು ನೋಡಿದೊಡನೆ ಹದಿನಾಲ್ಕು ವರುಷಗಳು ಅರಣ್ಯದಲ್ಲಿ ಪಟ್ಟ ಕಷ್ಟವನ್ನು ಮರೆಯುವನು. ಪೌರುಷದ ತನ್ನ ಜೀವನವನ್ನೇ ಒಂದು ವರುಷ ಬೃಹನ್ನಳೆಯಾಗಿ ಸವೆಸಿದ ಅವಮಾನವನ್ನೂ ಆತ ಲೆಕ್ಕಿಸನು. ದ್ರೌಪದಿಯು ಅವಮಾನದ ಸಮಯದಲ್ಲಿ ಮಾಡಿದ ವೀರಪ್ರತಿಜ್ಞೆ ಜಾರುವುದು. ಗೊಡ್ಡು ವೈರಾಗ್ಯದ ಬೂದಿ ಸಿಂಹಪರಾಕ್ರಮಿಯ ಅಗ್ನಿಕುಂಡವನ್ನು ಆವರಿಸುವುದು. ತಾಮಸಿಕ ಮೋಹ ದಯೆಯ ನೆಪದಲ್ಲಿ ಧಾಳಿಯಿಟ್ಟಿತು ಅರ್ಜುನನ ಹೃದಯಕ್ಕೆ. ಮತ್ತೊಂದು ಗಳಿಗೆ ಯಲ್ಲಿ ಮಹಾಶಸ್ತ್ರಾಸ್ತ್ರಗಳನ್ನು ಕಾರುವ ಗಾಂಡೀವ ಅರ್ಜುನನ ಕೈಯಿಂದ ಜಾರಿತು. ಕಣ್ಣಿನಲ್ಲಿ ಕಂಬನಿದುಂಬಿತು. ಅಂಗೋಪಾಂಗ ವೆಲ್ಲ ಕಂಪಿಸಿತು. ಯುದ್ಧಮಾಡುವುದೆಂತು? ರಕ್ತದ ಕಾಲುವೆ ಯಿಂದ ರಣಭೂಮಿಯನ್ನು ಸಾರಿಸಿ ಜಯವಧುವಿಗೆ ಆಹ್ವಾನ ವೀಯಲೆ? ಆಚಾರ್ಯರನ್ನು ಪಿತಾಮಹರನ್ನು, ನೆಂಟರಿಷ್ಟರನ್ನು ಕೊಂದ ಕುಲುಷಿತ ಕೈಗಳಿಂದ ಧರ್ಮದೇವಿಯನ್ನು ಆರಾಧಿಸು ವುದೆ? ಹೀಗೆ ಯೋಚಿಸುತ್ತ ಕಾರ್ಪಣ್ಯ ದೋಷದಿಂದ ಹತ ಸ್ವಭಾವನಾಗಿ ಯುದ್ಧಮಾಡುವುದು ಧರ್ಮವೇ ಎಂದು ಶ್ರೀ ಕೃಷ್ಣನನ್ನು ಪ್ರಶ್ನಿಸುವನು. ಆಗಲೇ

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್।
ಅನಾರ್ಯಜುಷ್ಟಮಸ್ವರ್ಗ್ಯಂ ಅಕೀರ್ತಿಕರಂ ಅರ್ಜುನ॥
ಕ್ಲೈಬ್ಯಂ ಮಾ ಸ್ಮಗಮಃ ಪಾರ್ಥನೈತತ್ತ್ವಯ್ಯುಪಪದ್ಯತೇ।
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ॥

ಎಂದು ಗುಡುಗಿನಂತೆ ಮೊಳಗುವ ಗಂಭೀರವಾಣಿಯಿಂದ ಶ್ರೀ ಕೃಷ್ಣನ ಗೀತಾ ಸಂದೇಶ ಮೊದಲಾಗುವುದು. ಜ್ಞಾನ ಭಕ್ತಿ

ವೈರಾಗ್ಯಗಳ ಬಿರುಗಾಳಿಯಿಂದ ತಾತ್ಕಾಲಿಕವಾಗಿ ಆವರಿಸಿದ ಅಜ್ಞಾನದ ಬೂದಿ ಹಾರಿಹೋಗುವುದು. ಸ್ವರ್ಗ ತಾನಾಗಿ ತೆರೆದ ಬಾಗಿಲಿನಂತೆ ಇದೆ ಧರ್ಮಯುದ್ಧ. ಗೆದ್ದರೆ ಇಹಲೋಕದ ಸೌಖ್ಯ, ಮಡಿದರೆ ಪರಲೋಕದ ಸೌಖ್ಯ. ಸ್ವಧರ್ಮಕ್ಕೋಸ್ಕರ ಮಡಿದರೂ ಶ್ರೇಷ್ಠವೇ—ಮುಂತಾದ ಪೌರುಷದ ವಾಕ್ಯದ ಸಲಾಕಿಯಿಂದ ಅರ್ಜುನನ ಅಗ್ನಿಕುಂಡವನ್ನು ಮೀಟಿ ಪುನಃ ಕ್ಷಾತ್ರಪೌರುಷದ ಕಿಡಿ ಕಾರುವಂತೆ ಮಾಡುವನು. ಅರ್ಜುನ ನನ್ನು ನಿಮಿತ್ತ ಮಾತ್ರವಾಗಿ ಮಾಡಿಕೊಂಡು. ಅಧರ್ಮದ ಕಳೆಯನ್ನು ಬೇರು ಸಹಿತ ನಿರ್ದಾಕ್ಷಿಣ್ಯವಾಗಿ ಕಿತ್ತೊಗೆದು ಶಾಶ್ವತ ಧರ್ಮವನ್ನು ಜಗತ್ತಿಗೆ ಬೋಧಿಸುವನು. ಇದೇ ಗೀತೆ.

## ೨. ಅರ್ಜುನನ ವಿಷಾದ

ಭಗವದ್ಗೀತೆ ಪ್ರಾರಂಭವಾಗುವುದು ವಿಷಾದ ಯೋಗದಿಂದ. ಅನೇಕ ವೇಳೆ ವಿಷಾದದಿಂದ ಭಗವಂತನೊಡನೆ ಎಂತಹ ಯೋಗ ಪ್ರಾಪ್ತವಾಗಬಹುದು ಎನ್ನಬಹುದು. ಆದರೆ ಅರ್ಜುನ ಕೃಷ್ಣ ರಿಗೂ ಇದುವರೆಗೆ ಇದ್ದ ಸಂಬಂಧ ಸ್ನೇಹದ ಸಂಬಂಧ. ಇಬ್ಬರೂ ಒಂದೇ ಸಮ ಎಂದು ಭಾವಿಸಿದ್ದರು. ಆದರೆ ಕೃಷ್ಣನ ಮಹಿಮೆ ಅರ್ಜುನನಿಗೆ ಗೊತ್ತಾದದ್ದು ತಾನು ಮೋಹದ ಪ್ರವಾಹದಲ್ಲಿ ಕೊಚ್ಚಿಹೋದಾಗ. ಅರ್ಜುನನಿಗೆ ಶ್ರೀಕೃಷ್ಣ ಕೈಯನ್ನು ಕೊಟ್ಟು ಮೇಲಕ್ಕೆ ಎತ್ತದೇ ಇದ್ದರೆ ಅರ್ಜುನ ಉದ್ಧಾರವಾಗುತ್ತಿರಲಿಲ್ಲ. ಈ ವಿಷಾದವೇ ಅರ್ಜುನನನ್ನು ಶಿಷ್ಯನ ಸ್ಥಾನಕ್ಕೆ ತರುವುದು. ಕೃಷ್ಣನನ್ನು ಆಚಾರ್ಯನ ಸ್ಥಾನಕ್ಕೆ ಏರಿಸುವುದು.

ಒಮ್ಮೆ ಮೋಹ ದಯೆಯ ರೂಪದಲ್ಲಿ ಯಾವಾಗ ಅರ್ಜುನನ ಹೃದಯವನ್ನು ಪ್ರವೇಶಿಸುವುದೋ, ಆಗ ಅದು ಅವನ ಬುದ್ಧಿ ಶಕ್ತಿಯನ್ನೆಲ್ಲ ಕುಂಠಿತಮಾಡುವುದು. ವಸ್ತುವನ್ನು ನಿಜವಾದ ದೃಷ್ಟಿಯಿಂದ ನೋಡಲು ಸಾಧ್ಯವಾಗುವುದಿಲ್ಲ. ಮಬ್ಬು ಆವರಿಸುವುದು. ಅರ್ಜುನ ಯುದ್ಧಮಾಡದೆ ಇರುವುದಕ್ಕೆ ಯಾವ ವಿಚಾರಸರಣಿಯನ್ನು ಕೊಡುವನೋ ಅವುಗಳೆಲ್ಲ ಈ ದೋಷದಿಂದ ಆವೃತವಾಗಿವೆ.

ಎಲ್ಲರೂ ಹೋದಮೇಲೆ ರಾಜ್ಯಭೋಗದಿಂದ ಪ್ರಯೋಜನ ವೇನು? ಇದೊಂದು ಅರ್ಜುನ ಕೊಡುವ ಕಾರಣ. ಕುರುಕ್ಷೇತ್ರ ದಲ್ಲಿ ಜಯ ಸುಲಭವಾಗಿ ಸಿಕ್ಕುವುದಿಲ್ಲ. ಅಲ್ಲಿಗೆ ಬಂದ ವೀರಾದಿ ವೀರರು ಸಾವಿಗಂಜಿ ಓಡಿಹೋಗುವವರಲ್ಲ. ಸಾಯುವವರೆಗೆ ಅರ್ಜುನನ ಅಭೀಷ್ಟ ನೆರವೇರುವುದಿಲ್ಲ. ಇವರೆಲ್ಲ ಹೋದ ಮೇಲೆ ಹಾಳೂರು ಉಳಿಯುವುದು, ಆಳುವುದಕ್ಕೆ. ಅಲ್ಲಿ ಯಾವ ಸಂತೋಷವಿದ್ದೀತು. ನಮ್ಮ ಗೆಲುವಿನಿಂದ ನಮಗೆ ಸಂತೋಷವಾಗಬೇಕಾದರೆ, ಅದನ್ನು ನೋಡಲು ಇರಬೇಕು, ಹೊಗಳುವುದಕ್ಕೆ ಇರಬೇಕು, ಸಹಭಾಗಿಯಾಗುವುದಕ್ಕೆ ಇರಬೇಕು. ಇವುಗಳಾವುವೂ ಇಲ್ಲದ ಗೆಲುವಿನಿಂದ ಪ್ರಯೋಜನವೇನು?

ಇಲ್ಲಿ ಅರ್ಜುನ ಸಮಸ್ಯೆಯನ್ನು ನೋಡುತ್ತಿರುವುದು ತನ್ನ ವೈಯಕ್ತಿಕ ದೃಷ್ಟಿಯಿಂದ. ಇಲ್ಲಿ ಕುರುಕ್ಷೇತ್ರದ ಯುದ್ಧಕ್ಕೆ ಎರಡು ದೃಷ್ಟಿಗಳಿವೆ. ಒಂದು ಪಾಂಡವರಿಗೆ ಮತ್ತು ಕೌರವರಿಗೆ ಸಂಬಂಧವಿರುವುದು. ಇದು ಗೌಣ. ಅರ್ಜುನ ಈ ದೃಷ್ಟಿಯಿಂದ ಮಾತ್ರ ನೋಡುತ್ತಿರುವನು. ಮತ್ತೊಂದು ಧರ್ಮಕ್ಕೂ ಅಧರ್ಮಕ್ಕೂ ಇರುವ ಘರ್ಷಣೆ. ಇದು ಭೂಮದೃಷ್ಟಿ. ಅಧರ್ಮವನ್ನು ನಾಶಮಾಡಬೇಕು. ಹಾಗೆ ನಾಶಮಾಡುವಾಗ

ಸರ್ವನಾಶವಾದರೂ ಚಿಂತೆ ಇಲ್ಲ. ಧರ್ಮಕ್ಕೆ ಎಲ್ಲವನ್ನೂ ಬಲಿಕೊಡಲು ಸಿದ್ಧನಾಗಿರಬೇಕು. ದಯಾದಾಕ್ಷಿಣ್ಯವಿಲ್ಲ ಈ ಮಾರ್ಗದಲ್ಲಿ. ಶ್ರೀಕೃಷ್ಣ ನೋಡುವುದು ಈ ದೃಷ್ಟಿಯಿಂದ. ಕೇವಲ ತನ್ನ ವ್ಯಕ್ತಿಯ ದೃಷ್ಟಿಯಿಂದ ನೋಡುವ ನೆಲದ ಮೇಲೆ ಇರುವ ಅರ್ಜುನ ಸಮಷ್ಟಿದೃಷ್ಟಿಯಿಂದ ನೋಡುವ ಶ್ರೀಕೃಷ್ಣ ನಿರುವ ಅಂತರಿಕ್ಷಕ್ಕೆ ಹಾರಬೇಕಾಗಿದೆ. ಯಾವಾಗಲೂ ಸಣ್ಣ ದೃಷ್ಟಿಯಿಂದ ದೊಡ್ಡ ದೃಷ್ಟಿಯ ಕಡೆ ಹೋಗಬೇಕಾದರೆ ಯಾತನೆ ಯಾಗುವುದು. ಅದಕ್ಕೆ ನಾವು ಕಣ್ಣೀರಿನ ಬೆಲೆಯನ್ನು ಕೊಟ್ಟೇ ತೀರಬೇಕು.

ಅರ್ಜುನ ಕೊಡುವ ಎರಡನೆಯ ಕಾರಣವು ಕೂಡ ಕೆಳಗಿನ ಮಟ್ಟಕ್ಕೆ ಸೇರಿದುದು. "ಇದರಿಂದ ಪ್ರಿಯವಾಗುವುದಿಲ್ಲ" ಎನ್ನುವನು. ಅವನು ಒಂದು ಘಟನೆಯನ್ನು ಅಳೆಯುವುದು. ಅದರಿಂದ ಪ್ರಿಯವಾಗುವುದೆ, ಅಪ್ರಿಯವಾಗುವುದೇ ಎಂಬ ದೃಷ್ಟಿ ಯಿಂದ. ಪ್ರೇಯಸ್ಸಿನ ಮಾರ್ಗ ಬೇರೆ, ಶ್ರೇಯಸ್ಸಿನ ಮಾರ್ಗ ಬೇರೆ. ಅರ್ಜುನ ಪ್ರೇಯಸ್ಸಿನ ದೃಷ್ಟಿಯಿಂದ ನೋಡುತ್ತಿರು ವನು. ಆದರೆ ಕೆಲವು ವೇಳೆ ಅಪ್ರಿಯವಾದುದನ್ನು ಕೂಡ, ನೋವು ಕೊಡುವುದನ್ನು ಕೂಡ, ಮತ್ತೊಬ್ಬನಿಗೆ ಒಳ್ಳೆಯದನ್ನು ಮಾಡುವುದಕ್ಕೆ ಮಾಡಬೇಕಾಗಿದೆ. ಕೌರವನ ಪಂಗಡಕ್ಕೆ ಸೇರಿದವ ರೆಲ್ಲ ಅಧರ್ಮದ ಕಳೆಗಳು. ಏಕೆಂದರೆ, ಅನ್ಯಾಯಕ್ಕೆ ಅವರು ಸಹಾನುಭೂತಿ ತೋರುತ್ತಾ ಬಂದಿರುವರು. ಎಂದು ಅನ್ಯಾಯಕ್ಕೆ ಸಹಾನುಭೂತಿಯನ್ನು ಒಬ್ಬ ತೋರುವನೋ, ಅಷ್ಟು ಮಾತ್ರವಲ್ಲ ಅದಕ್ಕೆ ಸಹಾಯಕನಾಗಿ ನಿಲ್ಲುವನೋ ಅಂತಹವರು ಸಮಾಜ ವೆಂಬ ದೇಹದಲ್ಲಿ ಎದ್ದ ಕುರುಗಳು. ನಿರ್ದಾಕ್ಷಿಣ್ಯವಾಗಿ ವೈದ್ಯನ ಶಸ್ತ್ರದಿಂದ ಚಿಕಿತ್ಸೆಮಾಡಿ ಅದನ್ನು ತೆಗೆಯಬೇಕು. 'ಅಯ್ಯೋ

ಅಪ್ರಿಯವಾದುದನ್ನು ಮಾಡುತ್ತಿರುವೆನು' ಎಂದರೆ, ಹಾಗೆ ಹೇಳು ವವನು ಜವಾಬ್ದಾರಿಯ ಸ್ಥಾನದಲ್ಲಿ ಇರುವುದಕ್ಕೆ ಯೋಗ್ಯನಲ್ಲ.

"ಇದರಿಂದ ಪಾಪ ಬರುವುದು" ಎಂಬ ಮತ್ತೊಂದು ವಾದವನ್ನು ತರುವನು. ಗುರುಗಳು ಹಿರಿಯರು ಇವರನ್ನು ಕೊಂದರೆ ಪಾಪವೆಂಬ ಶಾಸ್ತ್ರವನ್ನು ಅವನು ನಂಬುತ್ತಿರುವನು. ಆದರೆ ಯಾವಾಗ ಒಬ್ಬ ಅಧರ್ಮಕ್ಕೆ ಪ್ರೋತ್ಸಾಹ ಕೊಡು ತ್ತಾನೆಯೋ ಅವನು ಗುರುವಾಗಲಿ, ಹಿರಿಯನಾಗಲಿ ಅವನು ವಧೆಗೆ ಅರ್ಹ ಎಂಬ ಅದೇ ಶಾಸ್ತ್ರದ ನುಡಿಯನ್ನು ಅರ್ಜುನ ಮರೆಯುವನು.

ಅನಂತರವೇ ಲೋಕಾರೂಢಿಯಲ್ಲಿರುವ ಮತ್ತೊಂದು ವಾದ. ಅದೇ "ಕುಲನಾಶದಿಂದ ಧರ್ಮನಾಶ–ಧರ್ಮನಾಶವಾದರೆ ಕುಲ ಸ್ತ್ರೀಯರು ಕೆಡುವರು–ಕುಲಸ್ತ್ರೀಯರು ಕೆಟ್ಟರೆ ವರ್ಣ ಸಂಕರ– ಇದರಿಂದ ನರಕಪ್ರಾಪ್ತಿ–ಇದರಿಂದ ಪಿತೃಗಳಿಗೆ ಪಿಂಡವಿಲ್ಲದೆ ಕೆಳಗೆ ಬೀಳುವರು, ಇತ್ಯಾದಿ".

ಈ ವಾದಗಳ ಹಿಂದೆಲ್ಲ ಅರ್ಜುನ ತನ್ನ ವೈಯಕ್ತಿಕ ದೃಷ್ಟಿ ಮತ್ತು ತಾತ್ಕಾಲಿಕ ಪ್ರಿಯವಾದ ದೃಷ್ಟಿಯಿಂದ ನೋಡುತ್ತಿರು ವನು. ಆದರೂ ತಾನು ಹೇಗೆ ತಿಳಿದುಕೊಂಡಿರುವನೋ ಅದೇ ಸತ್ಯವೆಂದು ಹೇಳಲೂ ಆರ. ಅವನು ಒಂದು ಧರ್ಮ ಸಂಕಟಕ್ಕೆ ಸಿಕ್ಕಿಕೊಳ್ಳುತ್ತಾನೆ. ಆಗಲೇ ಶ್ರೀಕೃಷ್ಣನನ್ನು ಹೀಗೆ ಕೇಳುವನು:

> ಕಾರ್ಪಣ್ಯದೋಷೋಪ ಹತ ಸ್ವಭಾವಃ
> ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢ ಚೇತಾಃ।
> ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
> ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್॥

"ದೈನ್ಯವೆಂಬ ದೋಷದಿಂದ ಕುಂದಿದ ಸ್ವಭಾವವುಳ್ಳವನಾಗಿ, ಧರ್ಮವಿಷಯದಲ್ಲಿ ಮೂಢವಾದ ಮನಸ್ಸುಳ್ಳವನಾಗಿ, ನಿನ್ನನ್ನು ಪ್ರಶ್ನೆಮಾಡುತ್ತೇನೆ. ಯಾವುದು ನನಗೆ ಶ್ರೇಯಸ್ಕರವೋ ಅದನ್ನು ನಿಶ್ಚಯಪೂರ್ವಕವಾಗಿ ಹೇಳು. ನಾನು ನಿನ್ನ ಶಿಷ್ಯ ನಿನ್ನನ್ನೇ ಶರಣು ಹೊಂದಿದ ನನಗೆ ಬೋಧಿಸು".

ಯಾವಾಗ ಅರ್ಜುನ ತನ್ನ ಅಹಂಕಾರವನ್ನು ಬಿಟ್ಟ, ತನಗೆ ಎಲ್ಲಾ ಚೆನ್ನಾಗಿ ಗೊತ್ತಿದೆ ಎಂಬ ಮೌಢ್ಯತೆಯನ್ನು ಬಿಟ್ಟ, ನೀನು ನನಗೆ ನಿಶ್ಚಯಿಸಿ ಹೇಳಬೇಕು ಎಂದು ಕೇಳಿಕೊಳ್ಳುವನೋ ಆಗ ಶ್ರೀಕೃಷ್ಣ ಇವನಿಗೆ ಬೋಧಿಸುವನು. ಈಗ ನಾನು ನಿನ್ನ ಶಿಷ್ಯ ಎನ್ನುವನು. ಮುಂಚೆ ಸಖ ಎಂದು ಕರೆಯುತ್ತಿದ್ದ. ಈಗ ಅವನು ಶ್ರೀಕೃಷ್ಣನಲ್ಲಿ ಶರಣಾಗಿರುವನು. ಯಾವಾಗ ದೇವರಲ್ಲಿ ನಾವು ಶರಣಾಗುವೆವೊ ಆಗಲೆ ನಮ್ಮನ್ನು ಉದ್ಧರಿಸುವ ಶಕ್ತಿ ಅವನಿಂದ ವ್ಯಕ್ತವಾಗಬೇಕಾದರೆ.

## ೩. ಶ್ರೀಕೃಷ್ಣನ ಸಮಾಧಾನ

ಶ್ರೀಕೃಷ್ಣ ಅರ್ಜುನನ ದುಃಖವನ್ನು ನೋಡಿ ಅಯ್ಯೋ, ಪಾಪ ಎನ್ನುವುದಿಲ್ಲ. ಅದೊಂದು ದೌರ್ಬಲ್ಯದ ಚಿಹ್ನೆ, ತಮೋಜನ್ಯವಾದ ವ್ಯಾಮೋಹದಿಂದ ಪ್ರಾಪ್ತವಾದುದು. ಇವನ್ನು ಸಾಂಕ್ರಾಮಿಕ ಜಾಡ್ಯದಂತೆ ಹೊರದೂಡಬೇಕೆಂಬ ಪೌರುಷದ ನುಡಿಯಿಂದ ಆರಂಭವಾಗುದು ಅವನ ಬೋಧನೆ.

"ಎಲೈ ಅರ್ಜುನ, ಆರ್ಯರಿಗೆ ಅಯೋಗ್ಯವೂ, ಸ್ವರ್ಗಗತಿಗೆ ವಿರೋಧವೂ, ಅಪಕೀರ್ತಿಯನ್ನುಂಟುಮಾಡುವುದೂ ಆದ ಈ ಮೋಹವು ಇಂತಹ ವಿಷಮ ಸಮಯದಲ್ಲಿ ನಿನಗೆ ಹೇಗೆ ಬಂತು?"

ಅರ್ಜುನನ ಅನುಕಂಪವನ್ನು ಆರ್ಯರಿಗೆ ಅಯೋಗ್ಯವೆಂದು ಹೇಳುವನು. ಎಲ್ಲಿ ಅಳಬಾರದೊ ಅಲ್ಲಿ ಅಳುತ್ತೇವೆಯೋ. ಅದೊಂದು ಅಯೋಗ್ಯದ ಚಿಹ್ನೆ. ಮರುಕ ಯಾರಿಗೆ ಯಾವ ಕಾಲದಲ್ಲಿ ತೋರಬೇಕೊ ಆಗ ತೋರಿದರೆ ಅದಕ್ಕೆ ಒಂದು ಬೆಲೆ ಇದೆ. ಅಪಾತ್ರರಿಗೆ ಅಕಾಲದಲ್ಲಿ ತೋರಿದರೆ ನಾವೊಂದು ದೊಡ್ಡ ತಪ್ಪನ್ನು ಮಾಡುತ್ತಿರುವೆವು. ಇದು ನನ್ನ ದೌರ್ಬಲ್ಯ ಎಂದು ತಿಳಿದುಕೊಂಡು ಅದರಿಂದ ಪಾರಾಗಲು ಯತ್ನಿಸಬೇಕು. ಇದೊಂದು ಭೂಷಣವೆಂದು ಎಲ್ಲರೆದುರಿಗೆ ತೋರುವಂತಹ ಆಭರಣವಲ್ಲ.

ಇದನ್ನು ಸ್ವರ್ಗಗತಿಗೆ ವಿರೋಧ ಎಂದು ಹೇಳುವನು. ಇದು ಸಾಧಾರಣ ಯುದ್ಧವಲ್ಲ. ಇದೊಂದು ಧರ್ಮಯುದ್ಧ. ಅರ್ಜುನನಿಗೆ ರಾಜ್ಯದ ಮೇಲೆ ಆಸೆ ಇಲ್ಲದೇ ಇದ್ದರೂ ಯುದ್ಧ ಮಾಡಬೇಕಾಗಿದೆ. ಕ್ಷತ್ರಿಯ ಧರ್ಮಯುದ್ಧದಲ್ಲಿ ಪ್ರಾಣವನ್ನು ತ್ಯಜಿಸುವಂತಹ ಸುದಿನ ಬರಲಿ ಎಂದು ಪ್ರಾರ್ಥಿಸುವನು. ಇಲ್ಲಿ ಅಂತಹ ಸುದಿನ ಪ್ರಾಪ್ತವಾದಾಗ ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಳ್ಳುವಂತೆ ಆಗಿದೆ ಅರ್ಜುನನ ಸ್ಥಿತಿ. ಇಂತಹ ಯುದ್ಧವನ್ನು ಕೈಕೊಂಡರೆ ಸ್ವರ್ಗಪ್ರಾಪ್ತಿ.

ಹಾಗೆ ಯುದ್ಧವನ್ನು ಬಿಟ್ಟು ಹೋಗುವುದು ಅಪಕೀರ್ತಿಗೆ ಕಾರಣವಾಗುವುದು. ಇಂತಹ ಧರ್ಮಯುದ್ಧವನ್ನು ಮಾಡಲಾರದೆ ಹೋದರೂ ಅವರ ಅಂಜಿಕೆಯೇ ಇದಕ್ಕೆ ಕಾರಣ ಎಂದು ಜನರು ಆಡಿಕೊಳ್ಳುವರು.

ಈ ಮೋಹ ವಿಷಮ ಸಮಯದಲ್ಲಿ ಬಂದಿದೆ. ಇದು ಯುದ್ಧಕ್ಕೆ ಅಣಿಯಾಗಬೇಕಾದ ಕಾಲ. ಅದನ್ನು ಬಿಟ್ಟುಬಿಡು

ವುದಕ್ಕೆ ಕಾಲ ಮೀರಿಹೋಗಿದೆ. ಈಗ ಯುದ್ಧವನ್ನು ಮಾಡು ವುದಕ್ಕಿಂತ ಮಾಡದೇ ಇರುವುದೇ ಪಾಪ ಎನ್ನುವನು ಶ್ರೀಕೃಷ್ಣ.

"ಎಲೈ ಅರ್ಜುನ, ಷಂಡತನವನ್ನು ಹೊಂದಬೇಡ. ನಿನಗೆ ಇದು ಯೋಗ್ಯವಲ್ಲ. ಎಲೈ ಶತ್ರುತಾಪನನೇ ತುಚ್ಛವಾದ ಮನಸ್ಸಿನ ದೌರ್ಬಲ್ಯವನ್ನು ಬಿಟ್ಟು ಏಳು".

ಷಂಡತನವನ್ನು ಹೊಂದಬೇಡ ಎನ್ನುವನು ಶ್ರೀಕೃಷ್ಣ. ಯಾವುದನ್ನು ಅರ್ಜುನ ದಯೆ ಕೃಪೆ ಅನುಕಂಪ ಎಂದು ಭಾವಿಸಿದ್ದನೋ ಅವೆಲ್ಲ ಷಂಡತನದ ವೇಷಗಳೆಂದು ತಕ್ಷಣವೇ ಕಂಡುಹಿಡಿಯುವನು. ಅನೇಕ ವೇಳೆ ನಮ್ಮ ಮನೋ ದೌರ್ಬಲ್ಯ ದೌರ್ಬಲ್ಯದಂತೆಯೇ ಬಂದರೆ ಅದನ್ನು ನಾವು ತಕ್ಷಣ ಕಂಡು ಹಿಡಿದು ಆಚೆಗಟ್ಟುವೆವು. ಆದರೆ ಅವು ವೇಷವನ್ನು ಬದ ಲಾಯಿಸಿಕೊಂಡು ಬರುತ್ತವೆ. ಆಗ ಅದರ ಬಲೆಗೆ ಬೀಳುವೆವು. ಬಿದ್ದು ಬಹಳ ಹೊತ್ತಾದಮೇಲೆ ನಮಗೆ ಅರಿವಾಗುವುದು. ಆದರೆ ಆಗ ಪಾರಾಗುವುದಕ್ಕೆ ವೇಳೆ ಮಿಂಚಿಹೋಗಿರುವುದು. ಶ್ರೀಕೃಷ್ಣ ಮಾನವನ ದೌರ್ಬಲ್ಯವೆಂಬ ವ್ಯಾಧಿಯನ್ನು ಅರಿಯು ವುದರಲ್ಲಿ ನಿಪುಣ. ಅದನ್ನು ಆದಿಯಲ್ಲೆ ಕಂಡುಹಿಡಿಯುವನು.

'ಇದು ನಿನಗೆ ಯೋಗ್ಯವಲ್ಲ' ಎಂದು ಅರ್ಜುನನಿಗೆ ಬುದ್ಧಿ ವಾದವನ್ನು ಹೇಳುವನು. ಇದೊಂದು ಬಹಳ ಧ್ವನಿಪೂರ್ಣ ವಾದ ನಿಂದೆ, ನಯವಾದ ನಿಂದೆ. ನಮ್ಮಲ್ಲಿ ಸುಪ್ತವಾಗಿರುವ ಯೋಗ್ಯಸಂಸ್ಕಾರಗಳು ಮೇಲೆ ಬರುವಂತೆ ಮಾಡುವ ನಿಂದೆ. ಅರ್ಜುನ ತುಂಬ ಮೇಲಿನ ಮಟ್ಟಕ್ಕೆ ಸೇರಿದವನು. ಈಗ ಕೆಳಗೆ ಬಿದ್ದಿರುವನು. ಚೇತರಿಸಿಕೊಂಡು ಮೇಲೇಳಬೇಕು. ಯೋಗ್ಯ ವಾದ ರೀತಿಯಲ್ಲಿ ವ್ಯವಹರಿಸಬೇಕು ಎಂಬ ಇಚ್ಛೆ ಅವನಿಂದಲೇ ಎದ್ದು ಅವನು ಉತ್ತಮನಾಗಬೇಕು. ನಾವು ಅನೇಕ ವೇಳೆ

ಬೈಗುಳದ ಸುರಿಮಳೆಯನ್ನೇ ಕರೆಯುತ್ತೇವೆ ಮತ್ತೊಬ್ಬನ ಮೇಲೆ. ಆದರೆ ಅದರಿಂದ ಆಗುವ ಪರಿಣಾಮ ಅಲ್ಪ. ಬುದ್ಧಿವಂತ ಯಾವುದೋ ಒಂದು ಮಾತನ್ನಾಡಿ ಜಾಗ್ರತಿ ಕೊಡುವನು. ಶ್ರೀಕೃಷ್ಣ ಅರ್ಜುನನ ರಥವನ್ನು ಹೊಡೆಯುವುದರಲ್ಲಿ ಮಾತ್ರ ನಿಪುಣನಲ್ಲ. ಅವನು ಅರ್ಜುನನೆಂಬ ನರಾಶ್ವದ ಹೃದಯವನ್ನೂ ಚೆನ್ನಾಗಿ ಬಲ್ಲವನು. ಒಂದು ಚಾವಟಿಯ ಶಬ್ದ ಸಾಕು ಮೇಲಕ್ಕೆ ಎದ್ದು ಓಡುವಂತೆ ಮಾಡುವುದಕ್ಕೆ. 'ಇದು ನಿನಗೆ ಯೋಗ್ಯವಲ್ಲ' ಎಂಬ ಒಂದು ಮಾತು ಸಾಕು ಗೌರವಸ್ಥನಿಗೆ. ನಿಂದೆಯ ಸಹಸ್ರ ನಾಮಾವಳಿಯನ್ನು ಉಪಯೋಗಿಸಬೇಕಾಗಿಲ್ಲ.

ಅರ್ಜುನನ ಮನಸ್ಸಿನಲ್ಲಿರುವ ದೌರ್ಬಲ್ಯ ಯೋಗ್ಯವಾದುದಲ್ಲ, ತುಚ್ಛವಾದುದು. ಅದನ್ನು ಪೋಷಿಸುವಂತಹದಲ್ಲ, ಕ್ಷಯ ರೋಗದ ಕ್ರಿಮಿಯಂತೆ ಆಚೆಗೆ ಅಟ್ಟುವುದಕ್ಕೆ ಯೋಗ್ಯವಾದುದು. ಎಂತಹ ಬಲಾಢ್ಯನಾದರೂ ಕೆಲವು ವೇಳೆ ಮನಸ್ಸಿನ ದೌರ್ಬಲ್ಯಕ್ಕೆ ಒಳಗಾಗುತ್ತಾನೆ. ಆದರೆ ಅದು ತಾತ್ಕಾಲಿಕ ಅವಸ್ಥೆ. ಯೋಗ್ಯ ಬಹಳ ಬೇಗ ಚೇತರಿಸಿಕೊಂಡು ಏಳುತ್ತಾನೆ.

ಶ್ರೀಕೃಷ್ಣನ ಗೀತೆ ಎಂತಹ ವೀರನ ಗಾಯತ್ರಿಯಿಂದ ಮೊದಲಾಗುವುದು. ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಿದ್ದರು; ನೀವು ಗೀತೆಯಲ್ಲಿ ಇನ್ನೇನನ್ನೂ ಓದಬೇಕಾಗಿಲ್ಲ, ೨ನೆಯ ಅಧ್ಯಾಯದ ೨ ಮತ್ತು ೩ನೆಯ ಶ್ಲೋಕಗಳನ್ನು ಪಠಿಸಿ ಅದರಲ್ಲಿರುವ ಶಕ್ತಿಯನ್ನು ಹೀರಿದರೆ ಸಾಕು. ಇಡೀ ಗೀತೆಯ ಸಾರ ನಿಮಗೆ ಬರುವುದು. ಸಂಸಾರವೇ ಒಂದು ಕುರುಕ್ಷೇತ್ರ. ಇದರಲ್ಲಿ ಜೀವಿಸಬೇಕಾದರೆ ಹಲವು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ನಮ್ಮ ಬೆನ್ನನ್ನು ತೋರಿದರೆ ಸಮಸ್ಯೆ ಪರಿಹಾರವಾಗುವುದಿಲ್ಲ. ಅದನ್ನು ಪೀಠದಮೇಲಿಟ್ಟು ಪೂಜಿಸಿದರೆ ಪರಿಹಾರವಾಗುವುದಿಲ್ಲ. ಅದ

ರೊಂದಿಗ ಮುಷ್ಟಾಮುಷ್ಟಿ ಯುದ್ಧ ಮಾಡಬೇಕು. ಆಗಲೇ ಅದು ಫಲಕಾರಿಯಾಗಬೇಕಾದರೆ, ಯಾವುದನ್ನು ನಾವು ಆಧ್ಯಾತ್ಮಿಕ ಪ್ರಧಾನ ಶಾಸ್ತ್ರವೆಂದು ಪೂಜಿಸುತ್ತೇವೆಯೋ ಅದು ಗೊಡ್ಡು ವೈರಾಗ್ಯದಿಂದ ಪ್ರಾರಂಭವಾಗುವುದಿಲ್ಲ. ವೈರಾಗ್ಯದ ಬೂದಿಯನ್ನು ಊದಿ ಓಡಿಸುವುದು. ಪೌರುಷದ ಮಾತಿನ ಸಲಾಕೆಯಿಂದ ಅರ್ಜುನನ ಹೃದಯಾಗ್ನಿ ಕುಂಡವನ್ನು ಚೆನ್ನಾಗಿ ಆಡಿಸಿ ಪುನಃ ಕ್ಷಾತ್ರಪೌರುಷದ ಕಿಡಿ ಅಲ್ಲಿ ಏಳುವಂತೆ ಮಾಡುವುದು.

ಬರಿಯ ಮೇಲಿನ ಭಾವಗಳನ್ನು ಕೇಳಿದೊಡನೆಯೇ ಅರ್ಜುನನ ಶೋಕ ಶಾಂತವಾಗಿ ಬಿಡುವುದಿಲ್ಲ. ಪುನಃ ತನ್ನ ವಾದಸರಣಿಯನ್ನು ತರುತ್ತಾನೆ. ಆ ವಾದಸರಣಿಯೆಲ್ಲ ಕೇವಲ ವ್ಯಕ್ತಿಗತವಾದುದು. ಸಮಷ್ಟಿಯ ದೃಷ್ಟಿಯಿಂದ ನೋಡುವ ಮತಕ್ಕೆ ಅರ್ಜುನ ಇನ್ನೂ ಪ್ರಯಾಣಮಾಡಬೇಕಾಗಿದೆ. ಅವನು ಹೀಗೆ ಹೇಳುತ್ತಾನೆ:

“ಎಲೈ ಶತ್ರುಸಂಹಾರಕನೆ, ಮಧುಸೂದನ, ಪೂಜೆಗೆ ಯೋಗ್ಯರಾದ ಭೀಷ್ಮ ದ್ರೋಣರನ್ನು ನಾನು ಬಾಣಗಳಿಂದ ಹೇಗೆ ಎದುರಿಸಿ ಯುದ್ಧ ಮಾಡಲಿ?

“ಮಹಾನುಭಾವರಾದ ಗುರುಗಳನ್ನು ಕೊಲ್ಲದೆ ಈ ಲೋಕದಲ್ಲಿ ಭಿಕ್ಷಾನ್ನವನ್ನಾದರೂ ತಿನ್ನುವುದು ಶ್ರೇಯಸ್ಕರ. ಆದರೆ ಅರ್ಥಾಪೇಕ್ಷಿಗಳಾದ ಗುರುಗಳನ್ನು ಕೊಂದರೆ ಕೇವಲ ರಕ್ತಲಿಪ್ತವಾದ ಭೋಗಗಳನ್ನು ಈ ಲೋಕದಲ್ಲಿ ಮಾತ್ರ ಅನುಭವಿಸಬೇಕಾಗುವುದು.

“ನಾವೇ ಒಂದು ವೇಳೆ ಜಯಿಸುತ್ತೇವೆಯೋ ಅಥವಾ ನಮ್ಮನ್ನೇ ಇವರು ಜಯಿಸುತ್ತಾರೆಯೋ—ಈ ಎರಡರಲ್ಲಿ ಯಾವುದು ಶ್ರೇಷ್ಠವೋ ಅದನ್ನು ನಾವು ಅರಿಯೆವು. ಯಾರನ್ನು

ಕೊಂದು ನಮಗೆ ಬದುಕಲು ಇಷ್ಟವಿಲ್ಲವೋ ಆ ಕೌರವರೇ ನಮ್ಮ ಇದಿರಿನಲ್ಲಿ ನಿಂತಿರುವರು.

" ಈ ಭೂಮಿಯಲ್ಲಿ ಶತ್ರುಶೂನ್ಯವಾದ ಸಮೃದ್ಧರಾಜ್ಯವನ್ನು ಹೊಂದಿದರೂ ಮತ್ತು ದೇವತೆಗಳ ಮೇಲೆ ಒಡೆತನವನ್ನು ಪಡೆದರೂ ಇಂದ್ರಿಯಗಳನ್ನು ಕೊರಗಿಸುತ್ತಿರುವ ನನ್ನ ಈ ಶೋಕವನ್ನು ಯಾವುದು ಹೋಗಲಾಡಿಸುವುದೋ ಅಂತಹ ಉಪಾಯವನ್ನು ಕಾಣೆನು ".

ಶ್ರೀಕೃಷ್ಣ ಇದನ್ನು ಕೇಳಿ " ಪ್ರಹಸನ್ನಿವ, ಇದಂ ವಚಃ " ನಗುತ್ತಿರುವವನಂತೆ ಹೀಗೆ ಮಾತನಾಡಿದನು. ಕೇಳಿದವನೆದೆ ಕರಗುವಂತಹ ಭಾಷೆಯನ್ನು ಅರ್ಜುನ ಉಪಯೋಗಿಸಿದನು. ಶ್ರೀಕೃಷ್ಣ ಅದನ್ನು ಕೇಳಿ ' ನಗುತ್ತ ' ಎಂದು ವ್ಯಾಸರು ಹೇಳಿದರು. ಇದರಿಂದ ಶ್ರೀಕೃಷ್ಣ ಅರ್ಜುನನ ಕಾರಣಗಳನ್ನು ಎಷ್ಟು ಲಘು ವಾಗಿ ಭಾವಿಸುತ್ತಾನೆ ಎಂದು ಗೊತ್ತಾಗುವುದು. ಮಗು ಹೊರಗೆ ಜಗಳವಾಡಿ ಅಳುತ್ತ ತಂದೆಗೆ ವರದಿ ಒಪ್ಪಿಸುತ್ತದೆ. ಆ ಮಗುವಿನ ದೃಷ್ಟಿಯಲ್ಲಿ ಪ್ರಪಂಚದಲ್ಲಿ ಏನೋ ಒಂದು ಅಸಾಧಾರಣವಾಗಿರು ವುದು ಆಗಿಹೋಗಿದೆ. ಆದರೆ ಅದನ್ನು ಹಿರಿಯ ನಗುತ್ತ ಕೇಳುವನು.

ಶ್ರೀಕೃಷ್ಣ ಇಲ್ಲಿ ಅರ್ಜುನನ ವ್ಯಾಮೋಹವನ್ನು ಕಳೆಯು ವುದಕ್ಕೆ ಯಾವುದೋ ಒಂದು ದೃಷ್ಟಿಯಿಂದ ಮಾತನಾಡು ವುದಿಲ್ಲ. ಹಲವು ದೃಷ್ಟಿಕೋನಗಳಿಂದ ಮಾತನಾಡುವನು. ವೈದ್ಯನು ರೋಗಿಯ ಯಾವುದೋ ಒಂದು ಖಾಯಿಲೆಗೆ ಒಂದೇ ಔಷಧಿಯನ್ನು ಕೊಡದೆ, ಅದರಲ್ಲಿ ನಾಲ್ಕೈದನ್ನ ಬೆರಸುವನು. ರೋಗ ಒಂದಕ್ಕೆ ಅಲ್ಲದೇ ಇದ್ದರೆ ಇನ್ನೊಂದಕ್ಕಾದರೂ ಬಗ್ಗಲಿ ಎಂದು. ತತ್ತ್ವದೃಷ್ಟಿಯಿಂದ ಮಾತನಾಡುತ್ತಾನೆ. ವ್ಯವಹಾರ

ದೃಷ್ಟಿಯಿಂದ ಮಾತನಾಡುತ್ತಾನೆ, ಸ್ವಧರ್ಮದ ದೃಷ್ಟಿಯಿಂದ ಮಾತನಾಡುತ್ತಾನೆ. ಕೀರ್ತಿಯ ದೃಷ್ಟಿಯಿಂದ ಮಾತನಾಡುತ್ತಾನೆ. ಕರ್ಮಯೋಗಿಯ ದೃಷ್ಟಿಯಿಂದ ಮಾತನಾಡುತ್ತಾನೆ. ಅಂತೂ ಒಂದಕ್ಕೆ ಬಲಿಯಾಗದೇ ಇದ್ದರೆ ಇನ್ನೊಂದಕ್ಕೆ ಬಲಿಯಾಗಿ ತನ್ನ ಪಾಲಿಗೆ ಬಂದಿರುವ ಕರ್ತವ್ಯವನ್ನು ಮಾಡಲಿ ಎಂದು. ಶ್ರೀ ಕೃಷ್ಣ ಉಪಯೋಗಿಸುವ ವಾದಸರಣಿ ಚಮತ್ಕಾರವಾಗಿರುವುದು. ಎರಡನೆಯ ಅಧ್ಯಾಯದಲ್ಲಿ ಬರುವ ವಾದಸರಣಿಯಲ್ಲಿಯೇ. ಭಗವದ್ಗೀತೆಯಲ್ಲಿ ಅನಂತರ ಬೇರೆ ಬೇರೆ ಅಧ್ಯಾಯದಲ್ಲಿ ಏನೇನು ವಿಷಯಗಳು ಬರುತ್ತವೆಯೋ ಅವರ ಸ್ವಲ್ಪವನ್ನು ಇಲ್ಲಿ ನಮಗೆ ರುಚಿತೋರಿಸುವನು. ಯಾವುದಾದರೂ ಮನೆಗೆ ದೊಡ್ಡ ಸಂತರ್ಪಣೆ ಊಟಕ್ಕೆ ಹೋದರೆ. ಮೊದಲು ಎಲೆಯ ಮೇಲೆ ಊಟಕ್ಕೆ ಮಾಡಿರುವ ಪದಾರ್ಥಗಳನ್ನೆಲ್ಲ ಹೇಗೆ ಸ್ವಲ್ಪ ಸ್ವಲ್ಪ ಬಡಿಸುವರೋ, ಹಾಗಿದೆ ಎರಡನೆಯ ಅಧ್ಯಾಯ. ಅನಂತರ ಊಟಮಾಡುವವನು ಅದರಲ್ಲಿ ಯಾವುದರ ಮೇಲೆ ತನಗೆ ಪ್ರೀತಿಯೋ ಅದನ್ನು ಪುನಃ ಕೇಳಿ ಹಾಕಿಸಿಕೊಳ್ಳಬಹುದು.

ಶ್ರೀಕೃಷ್ಣ ದಾರ್ಶನಿಕ ದೃಷ್ಟಿಯಿಂದ ಮಾತನಾಡುವನು:

"ನೀನು ಶೋಕಿಸಲು ಯೋಗ್ಯರಲ್ಲದವರನ್ನು ಕುರಿತು ಶೋಕಿಸುತ್ತೀಯೆ ಮತ್ತು ಜ್ಞಾನಿಗಳ ಮಾತನ್ನು ಆಡುತ್ತಿರುವೆ. ಪಂಡಿತರು ಸತ್ತವರನ್ನಾಗಲಿ ಬದುಕಿರುವವರನ್ನಾಗಲಿ ಕುರಿತು ಶೋಕಿಸುವುದಿಲ್ಲ.

"ನಾನು ಯಾವ ಕಾಲದಲ್ಲಿಯೂ ಇರಲಿಲ್ಲವೆಂಬುದೇ ಇಲ್ಲ. ನೀನು ಮತ್ತು ಈ ರಾಜರು ಇರಲಿಲ್ಲವೆಂಬುದೇ ಇಲ್ಲ. ಇನ್ನು ಮುಂದೆಯೂ ನಾವೆಲ್ಲರೂ ಇರುವುದಿಲ್ಲವೆಂಬುದೂ ಇಲ್ಲ.

"ದೇಹವುಳ್ಳ ಆತ್ಮನಿಗೆ ಈ ದೇಹದಲ್ಲಿ ಬಾಲ್ಯ, ಯೌವನ,

ಜರಾವಸ್ಥೆಗಳು ಹೇಗೊ, ಹಾಗೆಯೇ ಬೇರೆ ದೇಹದ ಪ್ರಾಪ್ತಿಯೂ ಕೂಡ. ಈ ವಿಷಯದಲ್ಲಿ ಜ್ಞಾನಿಯು ಮರುಳಾಗುವುದಿಲ್ಲ.

"ಇಂದ್ರಿಯಗಳಿಗೂ ವಿಷಯಗಳಿಗೂ ಆಗುವ ಸ್ಪರ್ಶಗಳು ಶೀತೋಷ್ಣಗಳನ್ನೂ ಸುಖದುಃಖಗಳನ್ನೂ ಕೊಡತಕ್ಕವು. ಅವು ಬಂದು ಹೋಗುವ ಸ್ವಭಾವವುಳ್ಳವುಗಳು, ಅನಿತ್ಯ. ಆದುದರಿಂದ ಎಲೈ ಅರ್ಜುನ, ಅವುಗಳನ್ನು ಸಹಿಸಿಕೊ.

"ಸುಖದುಃಖಗಳನ್ನು ಸಮಾನವೆಂದು ಭಾವಿಸುವ ಜ್ಞಾನಿಯಾದ ಯಾವ ಪುರುಷನನ್ನು ಇವು ವ್ಯಥೆಗೊಳಿಸುವುದಿಲ್ಲವೋ ಆತನು ಅಮೃತತ್ತ್ವಕ್ಕೆ ಯೋಗ್ಯನಾಗುವನು.

"ಅಸತ್ ವಸ್ತುವಿಗೆ ವ್ಯಕ್ತಿತ್ವವಿಲ್ಲ. ಸದ್ ವಸ್ತುವಿಗೆ ನಾಶ ವಿಲ್ಲ. ಇವೆರಡರ ನಿರ್ಣಯವನ್ನು ತತ್ತ್ವಜ್ಞರು ತಿಳಿದಿರುತ್ತಾರೆ.

"ಯಾವುದರಿಂದ ಇದೆಲ್ಲವೂ ವ್ಯಾಪ್ತವಾಗಿರುವುದೊ. ಅದನ್ನು ವಿನಾಶರಹಿತವೆಂದು ತಿಳಿದುಕೊ. ಈ ಅವ್ಯಯದ ವಿನಾಶವನ್ನು ಮಾಡಲು ಯಾವನೂ ಸಮರ್ಥನಾಗುವುದಿಲ್ಲ.

"ನಿತ್ಯವೂ ಅವಿನಾಶಿಯೂ ಅಪ್ರಮೇಯನೂ ಆದ ಆತ್ಮನ ಈ ದೇಹಗಳು ನಶ್ವರವೆಂದು ಹೇಳುತ್ತಾರೆ, ಆದುದರಿಂದ ಯುದ್ಧಮಾಡು.

"ಈತನು ಕೊಲ್ಲುವವನೆಂದು ಯಾರು ತಿಳಿಯುತ್ತಾನೆಯೊ ಮತ್ತು ಈತನು ಕೊಲ್ಲಲ್ಪಟ್ಟವನೆಂದು ಯಾರು ಭಾವಿಸುತ್ತಾನೆಯೊ ಆ ಇಬ್ಬರೂ ಅರಿಯರು. ಈ ಆತ್ಮನು ಕೊಲ್ಲುವುದೂ ಇಲ್ಲ, ಕೊಲ್ಲಲ್ಪಡುವುದೂ ಇಲ್ಲ.

"ಈತನು ಯಾವಾಗಲೂ ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಒಂದೆ ಉತ್ಪನ್ನವಾಗಿ ಪುನಃ ಇಲ್ಲದಿರುವುದೂ

ಇಲ್ಲ. ಈತನು ಜನ್ಮರಹಿತನು ನಿತ್ಯನು ಶಾಶ್ವತನು ಪುರಾಣನು; ಶರೀರ ನಾಶವಾಗುತ್ತಿದ್ದರೂ ನಾಶವಾಗುವುದಿಲ್ಲ.

"ಈ ಆತ್ಮನು ಅವಿನಾಶಿ. ನಿತ್ಯ. ಜನ್ಮರಹಿತ. ಕ್ಷಯವಿಲ್ಲದವನು ಎಂದು ಯಾರು ತಿಳಿದಿರುವರೋ ಆ ಪುರುಷನು ಯಾರನ್ನು ಹೇಗೆ ಕೊಲ್ಲಿಸುತ್ತಾನೆ? ಯಾರನ್ನು ಹೇಗೆ ಕೊಲ್ಲುತ್ತಾನೆ?

"ಮನುಷ್ಯನು ಹಳೆಯ ಬಟ್ಟೆಯನ್ನು ಬಿಟ್ಟು. ಹೇಗೆ ಬೇರೆಯ ಹೊಸ ವಸ್ತ್ರಗಳನ್ನು ತೆಗೆದುಕೊಳ್ಳುವನೋ. ಹಾಗೆಯೇ ದೇಹವನ್ನು ಹೊಂದಿರುವ ಆತ್ಮನು ಜೀರ್ಣವಾದ ಶರೀರವನ್ನು ಬಿಟ್ಟು. ಬೇರೆ ಹೊಸ ಶರೀರಗಳನ್ನು ಹೊಂದುತ್ತಾನೆ.

"ಈ ಆತ್ಮನನ್ನು ಶಸ್ತ್ರಗಳು ಕತ್ತರಿಸಲಾರವು. ಈತನನ್ನು ಅಗ್ನಿಯು ಸುಡಲಾರದು. ಈತನನ್ನು ನೀರು ನೆನೆಯಿಸಲಾರದು ಮತ್ತು ಗಾಳಿಯು ಒಣಗಿಸಲಾರದು.

"ಈ ಆತ್ಮನು ಅವ್ಯಕ್ತನು. ಅಚಿಂತ್ಯನು. ವಿಕಾರರಹಿತನು ಎಂದು ಹೇಳಲ್ಪಡುತ್ತಾನೆ. ಆದುದರಿಂದ ನೀನು ಶೋಕಿಸಬಾರದು".

ಇಲ್ಲಿ ಶ್ರೀಕೃಷ್ಣ ದೇಹವನ್ನು ಮತ್ತು ಅದರೊಳಗೆ ಇರುವ ಆತ್ಮನನ್ನು ಸಂಪೂರ್ಣವಾಗಿ ಬೇರ್ಪಡಿಸುವನು. ಎರಡರ ಧರ್ಮಗಳೇ ಬೇರೆ. ದೇಹಕ್ಕೆ ಆಗುವ ವಿಕಾರಗಳು ಆತ್ಮನಿಗೆ ಎಂದಿಗೂ ತಾಗಲಾರವು. ಅರ್ಜುನ ದೇಹವನ್ನೇ ಆತ ಎಂದು ಭಾವಿಸಿ ಶೋಕಿಸುತ್ತಿರುವನು.

ಶ್ರೀಕೃಷ್ಣ ಅನಂತರ ಎರಡನೆಯ ಕಾರಣವನ್ನು ಕೊಡುವನು. ಅದೇ ಲೋಕಸಾಮಾನ್ಯವಾಗಿರುವ ದೃಷ್ಟಿ. ಹುಟ್ಟಿದವನಿಗೆ ಮರಣ ನಿಶ್ಚಯ—ಸತ್ತವನಿಗೆ ಜನನ ನಿಶ್ಚಯ. ಪರಿಹಾರವಾಗದ

ವಿಷಯವನ್ನು ಕುರಿತು ಶೋಕಿಸುತ್ತಿರುವೆ ಎನ್ನುವನು. ಯಾರು ಹುಟ್ಟಿರುವರೋ ಅವರನ್ನು ಈಗ ಅರ್ಜುನ ಕೊಲ್ಲದೇ ಬಿಟ್ಟರೂ, ವೃದ್ಧಾಪ್ಯಕ್ಕೊ ಯಾವುದಾದರೂ ರೋಗ–ರುಜಿನಕ್ಕೊ ಅಥವಾ ಅಕಸ್ಮಿಕಕ್ಕೊ ತುತ್ತಾಗಿ ಸಾಯುವರು. ಅವರೇನು ಚಿರಂಜೀವಿಗಳಾಗಿ ಇರುವುದಕ್ಕೆ ಆಗುವುದಿಲ್ಲ. ಎಂದಿದ್ದರೂ ಸಾಯಬೇಕು ಎಂದು ನಾವು ಇಂದೇ ಏತಕ್ಕೆ ಕೊಲ್ಲಬೇಕು ಎಂದು ಕೇಳಬಹುದು. ಇಲ್ಲಿ ಅರ್ಜುನ ಅವರನ್ನು ಬೇಕು ಎಂದು ಕೊಲ್ಲುವುದಕ್ಕೆ ಹೋಗಿಲ್ಲ. ಅವರೇ ಕಾಲುಕೆರೆದುಕೊಂಡು ಯುದ್ಧಕ್ಕೆ ಬಂದು ನಿಂತಿರುವರು. ಅದಕಾರಣ ಅವರು ತಮ್ಮ ಕ್ರಿಯೆಗೆ ತಕ್ಕ ಪರಿಣಾಮವನ್ನು ಹೊಂದಲೇಬೇಕು. ಇದರಂತೆಯೇ ಸತ್ತವರೆಲ್ಲ ಒಂದೇ ಸಲ ಈ ಪ್ರಪಂಚದಿಂದ ಹೊರಟು ಹೋಗುವುದಿಲ್ಲ. ಹೋಗುವುದು ಬರುವುದಕ್ಕಾಗಿ. ಮುಂದಿನ ಬಾಗಿಲಿನಿಂದ ಹೋಗಿ ಬೇರೆ ಒಂದು ದೇಹವನ್ನು ಧರಿಸಿಕೊಂಡು ಹಿಂದಿನ ಬಾಗಿಲಿನಿಂದ ಬರುವೆವು. ಸತ್ತವರೆಲ್ಲ ಒಂದೇಸಲ ಹೋಗಿಬರದೇ ಇದ್ದರೆ ಅದೇ ಮುಕ್ತಿಯಾಗಿಬಿಡುವುದು. ಆದರೆ ಮುಕ್ತಿ ಬರೀ ಸತ್ತರೆ ಮಾತ್ರ ಸಿಕ್ಕತಕ್ಕ ವಸ್ತುವಲ್ಲ. ಸತ್ತರೆ ಪುನಃ ಹುಟ್ಟದೇ ಇರುವುದಕ್ಕೆ ಯಾವ ಪುಣ್ಯವನ್ನು ಮಾಡಿರಬೇಕೋ ಅದನ್ನ ಮಾಡಿದ್ದರೆ ಮಾತ್ರ ಹಿಂತಿರುಗದೆ ಹೋಗಬಹುದು. ಅಜ್ಞಾನವೆಲ್ಲ ನಾಶವಾಗಿದ್ದರೆ ಮಾತ್ರ ಹೋದವನು ಹಿಂತಿರುಗದೆ ಇರಬಹುದು.

"ಹುಟ್ಟುವುದಕ್ಕೆ ಮೊದಲು ಕಾಣಿಸುವುದಿಲ್ಲ. ಮಧ್ಯದಲ್ಲಿ ಹುಟ್ಟಿದ ನಂತರ ಕಾಣಿಸಿಕೊಳ್ಳುತ್ತಿವೆ. ನಾಶವಾದಮೇಲೆಯೂ ಕಾಣಿಸಿಕೊಳ್ಳುವುದಿಲ್ಲ. ಈ ಸಂದರ್ಭದಲ್ಲಿ ಶೋಕವೇಕೆ?"

ನಮ್ಮ ಸಂಬಂಧವೆಲ್ಲ ಹುಟ್ಟಿದಮೇಲೆ ಆದುದು. ಆಗಲೆ ಗಂಡ ಹೆಂಡತಿ ಮಕ್ಕಳು, ಗುರುಹಿರಿಯರು, ಬಂಧು, ದ್ವೇಷಿ

ಎಂಬುವುಗಳು. ಅದಕ್ಕೆ ಮುಂಚೆ ನಾವು ದೇಹಧಾರಿಗಳಲ್ಲ. ಅವ್ಯಕ್ತದಲ್ಲಿರುವೆವು. ಕಣ್ಣುಮುಚ್ಚಿಕೊಂಡು ಹೋದಮೇಲೆ ಪುನಃ ಅದೇ ಅವಸ್ಥೆಗೆ ಹೋಗುವೆವು. ನಮ್ಮ ಆಟವೆಲ್ಲ ಮಧ್ಯದಲ್ಲಿರುವ ಕೆಲವು ಕಾಲಕ್ಕೆ ಸಂಬಂಧಪಟ್ಟದ್ದು. ಹುಟ್ಟುವುದಕ್ಕೆ ಮುಂಚೆ ಇರುವುದಿಲ್ಲ. ಸತ್ತಾದಮೇಲೆ ಇರುವುದಿಲ್ಲ. ನಮ್ಮದೆಲ್ಲ ನೀರುಗುಳ್ಳೆಗಳ ಸಂಬಂಧ. ಕೆಲವು ಕಾಲ ಒಟ್ಟಿಗೆ ಹರಿದು ಹೋಗುತ್ತವೆ. ಅನಂತರ ಅವು ಭಗ್ನವಾಗಿ ಹೋಗುತ್ತವೆ. ಯಾವುದು ಅನಿವಾರ್ಯವೊ ಅದಕ್ಕಾಗಿ ಕುರಿತು ಶೋಕಿಸುತ್ತಿದ್ದರೆ. ಈಗ ಯಾವ ಕೆಲಸವನ್ನು ಮಾಡಬೇಕಾಗಿರುವುದೋ ಅದನ್ನೂ ಮಾಡುವುದಿಲ್ಲ. ...

ಅನಂತರ ಶ್ರೀಕೃಷ್ಣ ಕ್ಷತ್ರಿಯನಿಗೆ ತುಂಬಾ ಪ್ರಿಯವಾದ ಸ್ವಧರ್ಮದ ದೃಷ್ಟಿಯಿಂದ ಮಾತನಾಡುವನು. ಮೇಲಿನ ತತ್ತ್ವದ ದೃಷ್ಟಿಯಿಂದ ಮಾತನಾಡಿದರೆ ಅರ್ಥವಾಗದೆ ಇರಬಹುದು. ಧರ್ಮ ಅದಕ್ಕಿಂತ ಕೆಳಗೆ ಇರುವುದು. ಸಮಾಜಕ್ಕೆ ಮತ್ತು ದೇಶಕ್ಕೆ ಸಂಬಂಧಿಸಿರುವುದು. ಅದನ್ನು ಸರಿಯಾದ ಸ್ಥಿತಿಯಲ್ಲಿಟ್ಟಿರುವುದು ಕ್ಷತ್ರಿಯರ ಧರ್ಮ. ಇದಕ್ಕಾಗಿಯೇ ಅವರು ಹುಟ್ಟಿರುವರು. ಮತ್ತು ಇದಕ್ಕಾಗಿಯೇ ಅವರು ಪ್ರಾಣವನ್ನು ಅರ್ಪಣೆ ಮಾಡಬೇಕಾಗಿರುವುದು.

"ಸ್ವಧರ್ಮವನ್ನು ಲಕ್ಷಿಸಿದರೂ ನೀನು ಭಯಪಡಬಾರದು. ಏಕೆಂದರೆ, ಧರ್ಮಯುಕ್ತವಾದ ಯುದ್ಧಕ್ಕಿಂತ ಕ್ಷತ್ರಿಯನಿಗೆ ಬೇರೆ ಯಾವ ಯಶಸ್ಸೂ ಇರುವುದಿಲ್ಲ.

"ಅಪ್ರಾರ್ಥಿತವಾಗಿ ಬಂದಿರುವ ಮತ್ತು ತೆರೆದಿರುವ ಸ್ವರ್ಗದ ಬಾಗಿಲಾಗಿರುವ ಇಂತಹ ಯುದ್ಧಗಳನ್ನು ಭಾಗ್ಯಶಾಲಿಯಾದ ಕ್ಷತ್ರಿಯರು ಪಡೆಯುತ್ತಾರೆ.

"ಹಾಗಿಲ್ಲದೆ ಈ ಧರ್ಮಯುಕ್ತವಾದ ಯುದ್ಧವನ್ನು ನೀನು ಮಾಡದೇ ಇದ್ದರೆ ಆ ಕಾರಣದಿಂದ ಸ್ವಧರ್ಮವನ್ನೂ ಕೀರ್ತಿಯನ್ನೂ ನಾಶಮಾಡಿಕೊಂಡು ಪಾಪವನ್ನು ಹೊಂದುತ್ತೀಯೆ".

ಅರ್ಜುನ ಯುದ್ಧವನ್ನು ಮಾಡಿ ಅದರಲ್ಲಿ ಗುರುಹಿರಿಯರು ಬಂಧು ಬಾಂಧವರನ್ನು ಕೊಂದರೆ ಪಾಪಬರುವುದೆಂದು ವಾದಿಸುತ್ತಿದ್ದ. ಶ್ರೀಕೃಷ್ಣ ಹಾಗೆ ಯುದ್ಧವನ್ನು ಮಾಡದೇ ಇದ್ದರೆ ಪಾಪ ಬರುವುದೆಂದು ಹೇಳುವನು.

ಇನ್ನಾವುದು ಮನಸ್ಸಿಗೆ ತಾಕದೇ ಇದ್ದರೂ ಮನುಷ್ಯ ಅಪಕೀರ್ತಿಗಾದರೂ ಅಂಜುವನು. ಸಮಾಜದಮೇಲೆ ಬೇರು ಬಿಟ್ಟಿರುವ ಜೀವಿಗೆ ಅಪಕೀರ್ತಿಯಷ್ಟು ಸಹಿಸಲಸಾಧ್ಯವಾದುದು ಮತ್ತೊಂದಿಲ್ಲ. ಈಗ ಶ್ರೀಕೃಷ್ಣ ಮತ್ತೂ ಕೆಳಗೆ ಬಂದು ಈ ದೃಷ್ಟಿಯಿಂದ ಮಾತನಾಡುವನು:

"ಜನರು ನಿನ್ನ ಅಕ್ಷಯವಾದ ಅಪಕೀರ್ತಿಯನ್ನು ಹೇಳಿಕೊಳ್ಳುವರು. ಸಂಭಾವಿತನಾದ ಮನುಷ್ಯನಿಗೆ ಅಪಕೀರ್ತಿಯು ಮರಣಕ್ಕಿಂತಲೂ ಹೆಚ್ಚು.

"ನೀನು ಭಯಪಟ್ಟು ಯುದ್ಧದಿಂದ ಹಿಮ್ಮೆಟ್ಟಿದೆ ಎಂದು ಮಹಾರಥಿಗಳು ತಿಳಿಯುವರು. ನೀನು ಯಾರಿಗೆ ಬಹು ಮಾನ್ಯವಾಗಿದ್ದೆಯೋ ಅವರ ಮುಂದೆಯೇ ಈಗ ಲಾಘವವನ್ನು ಹೊಂದುತ್ತೀಯೆ.

"ನಿನ್ನ ಶತ್ರುಗಳು ನಿನ್ನ ಸಾಮರ್ಥ್ಯವನ್ನು ನಿಂದಿಸುತ್ತ ಬಹು ಅಡಬಾರದ ಮಾತುಗಳನ್ನು ಆಡುವರು. ಅದಕ್ಕಿಂತ ಹೆಚ್ಚು ದುಃಖವುಳ್ಳದ್ದು ಏನುತಾನೆ ಇರುವುದು?"

ಅರ್ಜುನನೇನೊ ಈಗ ಜನ ತನ್ನನ್ನು ಏನಾದರೂ ಅಂದು ಕೊಂಡುಹೋಗಲಿ ತಾನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುವು

ದಿಲ್ಲ ಎಂದು ಹೇಳಬಹುದು. ಆದರೆ ಅರ್ಜುನನ ಮನಸ್ಥಿತಿ ಯಾವಾಗಲೂ ಹೀಗೆಯೇ ಇರುವುದಿಲ್ಲ. ಇನ್ನು ಕೊಂಚ ಕಾಲವಾದಮೇಲೆ ಅದು ಸಾಧಾರಣ ಸ್ಥಿತಿಗೆ ಬರುವುದು. ಆಗ ಜನರಾಡುವ ಮಾತನ್ನು ಅವನು ಸಹಿಸಲು ಅಸಾಧ್ಯವಾಗುವುದು. ರೋಗಿಗೆ ಆಪರೇಷನ್ ಮಾಡುವಾಗ ನೋವನ್ನು ಮರೆಸುವುದಕ್ಕೆ ಇಂಜೆಕ್ಷನ್ ಕೊಡುವರು. ಅದರ ಪ್ರಭಾವ ಯಾವಾಗಲೂ ಇರುವುದಿಲ್ಲ. ಕೆಲವು ಕಾಲವಾದಮೇಲೆ ನೋವು ತೋರುವುದು. ಈಗ ಅರ್ಜುನನ ಮನಸ್ಸಿನ ಮೇಲೆ ಕೃಪೆಯ ನೆವದಲ್ಲಿ ವ್ಯಾಮೋಹವೆಂಬ ಅಜ್ಞಾನ ಧಾಳಿ ಇಟ್ಟಿದೆ. ಅವನು ತಾತ್ಕಾಲಿಕವಾಗಿ ಅದರ ಪ್ರಭಾವಕ್ಕೆ ಬಿದ್ದಿರುವನು. ಅನಂತರ ತಾನೇ ತಾನು ಮಾಡಿದ ಕೆಲಸಕ್ಕೆ ನಾಚುವನು ಮತ್ತು ಅನ್ಯರು ಅಲ್ಲಗಳೆಯುವಾಗ ಸಹನೆಯನ್ನು ಮೀರುವನು ಎಂಬುದು ಶ್ರೀಕೃಷ್ಣನಿಗೆ ಗೊತ್ತಿದೆ. ಅರ್ಜುನನು ನನ್ನ ಮನಸ್ಸು ನನಗೆ ಗೊತ್ತಿಲ್ಲವೇ ಎನ್ನಬಹುದು. ಅವನಿಗೆ ಅವನ ಮನಸ್ಸಿನ ಈಗಿನ ಸ್ಥಿತಿ ಗೊತ್ತಿದೆಯೇ ಹೊರತು ಅನಂತರ ಅದು ಯಾವ ರೂಪವನ್ನು ತಾಳುವುದು ಎಂಬುದು ಅರ್ಜುನನಿಗಿಂತ ಚೆನ್ನಾಗಿ ಶ್ರೀಕೃಷ್ಣನಿಗೆ ಗೊತ್ತು.

ಶ್ರೀಕೃಷ್ಣ ಪುನಃ ಹೇಳಿರುವನು. ಕರ್ಮಯೋಗದ ದೃಷ್ಟಿಯಿಂದ ಮಾತನಾಡುವನು: "ಸುಖದುಃಖ ಲಾಭನಷ್ಟ ಜಯಾಪಜಯಗಳನ್ನು ಸಮನಾಗಿ ಭಾವಿಸಿಕೊಂಡು ಅನಂತರ ಯುದ್ಧ ಮಾಡಲು ಸನ್ನದ್ಧನಾಗು. ಈ ರೀತಿ ಮಾಡಿದರೆ ನೀನು ಪಾಪವನ್ನು ಹೊಂದುವುದಿಲ್ಲ".

"ನಿನಗೆ ಕರ್ಮವನ್ನು ಮಾಡಲು ಮಾತ್ರ ಅಧಿಕಾರವಿದೆ. ಅದರಿಂದ ಬರುವ ಫಲಗಳಿಗಲ್ಲ" ಎಂದು ಸಾರುವನು. ನಮ್ಮ

ದುಃಖಕ್ಕೆಲ್ಲ ಕಾರಣ ಕರ್ಮವಲ್ಲ. ಕರ್ಮಫಲಕ್ಕೆ ಕೈಯೊಡ್ಡುವುದು. ಯಾವಾಗ ಕರ್ಮಫಲಕ್ಕೆ ಕೈ ಒಡ್ಡುವೆವೊ ಅದು ನಮ್ಮನ್ನು ಕುಣಿಸುತ್ತದೆ. ಆಸೆ ತೋರಿಸುತ್ತದೆ. ಅಳು ನಗುಗಳಿಗೆ ನಮ್ಮನ್ನು ಒಳಗುಮಾಡುತ್ತದೆ. ಇದನ್ನು ಶ್ರೀರಾಮ ಕೃಷ್ಣರು ಹಲಸಿನ ಹಣ್ಣನ್ನು ಬಿಚ್ಚುವಾಗ ಕೈಗೆ ಎಣ್ಣೆ ಸವರಿಕೊಂಡು ಕೆಲಸಕ್ಕೆ ಹಾಕಿದರೆ ಅಂಟು ತಾಕುವುದಿಲ್ಲ ಎನ್ನುತ್ತಿದ್ದರು. ಆ ಎಣ್ಣೆಯೆ ನಿಸ್ಸಂಗವೆಂಬುದು. ಫಲದಮೇಲೆ ಅಪೇಕ್ಷೆಯಿಲ್ಲದಿರುವುದು.

"ಸಂಗವನ್ನು ತ್ಯಜಿಸಿ. ಯೋಗದ ಮೇಲೆ ನೆಲಸಿ, ಕರ್ಮವನ್ನು ಮಾಡು" ಎನ್ನುವನು. ಜಯಾಪಜಯಗಳನ್ನು ಲೆಕ್ಕಿಸದೆ, ಮನಸ್ಸು ದೇವರಮೇಲೆ ನೆಲಸಿ ಕೇವಲ ಯಂತ್ರದಂತೆ ಕೆಲಸ ಮಾಡಿದರೆ. ಅವನೆಂದಿಗೂ ಕೆಟ್ಟಕೆಲಸವನ್ನು ಮಾಡಲಾರ. ಮಾಡಿದ ಕೆಲಸದಿಂದ ಬರುವ ಯಾವ ಪರಿಣಾಮವೂ ಅವನನ್ನು ಬಂಧಿಸಲಾರದು.

"ಸಮತ್ವವನ್ನೇ ಯೋಗ ಎಂದು ಕರೆಯುವುದು" ಎನ್ನುವನು. ಕಣ್ಣುಮುಚ್ಚಿಕೊಂಡು ಪ್ರಪಂಚ ಮರೆಯುವುದಲ್ಲ ಯೋಗ. ದೊಂಬರವನಂತೆ ಮಾಯಾಮಂತ್ರಗಳನ್ನು ಮಾಡುವವನಲ್ಲ ಯೋಗಿ. ಯಾರ ಮನಸ್ಸು ಸಮತ್ವದಲ್ಲಿ ನೆಲಸಿರುವುದೋ. ಹೊಗಳಿಕೆ ತೆಗಳಿಕೆ. ಲಾಭ ನಷ್ಟ. ಶೀತ ಉಷ್ಣ, ಜಯ ಅಪಜಯಗಳೆಂಬ ದ್ವಂದ್ವದ ಬಿರುಗಾಳಿಗೆ ಒಳಗಾಗದೆ ಎಷ್ಟೇ ಗಾಳಿ ಬೀಸಿದರೂ ಚಲಿಸದೆ ಇರುವ ಮಂದರಪರ್ವತದಂತಹ ಮನಸ್ಸೆ ಯೋಗಿಯ ಮನಸ್ಸು. ಜಯಾಪಜಯಗಳ ಮೂಲಕ ನಾವು ಹೋಗುತ್ತೇವೆ. ಅವೇ ನಮ್ಮ ಗುರಿಯಲ್ಲ. ಇದೆಲ್ಲ ನಾವು ಒಂದು ಗುರಿ ಎಡೆಗೆ ಹೋಗುವಾಗ ಎಡಬಲದಲ್ಲಿ ಸಿಕ್ಕುವ ದೃಶ್ಯಗಳು. ಇವುಗಳಿಗೆ ಮರುಳಾಗದವನೇ ಯೋಗಿ.

"ಯೋಗ ಎಂದರೆ ನಾವು ಮಾಡುವ ಕೆಲಸದಲ್ಲಿ ತೋರಿಸುವ ಕೌಶಲ". ಕರ್ಮಕುಶಲಿಯೇ ನಿಜವಾದ ಯೋಗಿ. ಕರ್ಮವನ್ನು ತ್ಯಜಿಸುವವನಲ್ಲ. ಕರ್ಮಕುಶಲಿ ಎಂಬ ಪದ ಧ್ವನಿಪೂರ್ಣವಾದ ಪದ. ಕೌಶಲ ಎಂದರೆ ಚತುರತೆ. ನಾವು ಕೆಲಸಮಾಡುವಾಗ ತೋರಿಸುವ ಚಾಕಚಕ್ಯತೆ. ಹಾಗೆಂದರೇನು ಕೆಲಸಮಾಡಿದರೂ, ಕೆಲಸದಿಂದ ಪರಿಣಾಮಕ್ಕೆ ಒಳಗಾಗದ ರೀತಿ ಕೆಲಸಮಾಡುವುದು. ನಾವು ಯಾವ ಒಂದು ಕೆಲಸವನ್ನು ಮಾಡಿದರೂ ಅದು ಪರಿಣಾಮವನ್ನು ಕೊಡುವುದು. ಒಳ್ಳೆಯದು, ಕೆಟ್ಟದು ಮತ್ತು ಮಿಶ್ರ ಇವೇ ಅವು. ನಾವು ಮಾಡುವ ಕೆಲಸವೆಲ್ಲ ಈ ಮೂರರಲ್ಲಿ ಯಾವುದಾದರೂ ಒಂದಕ್ಕೆ ಸೇರಿದೆ. ಹಾಗಿದ್ದರೆ ಕರ್ಮಫಲದಿಂದ ತಪ್ಪಿಸಿಕೊಳ್ಳುವುದು ಹೇಗೆ? ಕರ್ಮಫಲ ಕರ್ಮಕ್ಕೆ ಬರುವುದು. ಆದರೆ ಕರ್ಮಚತುರ ಆ ಫಲವನ್ನು ಸ್ವೀಕರಿಸುವುದಿಲ್ಲ. ಆಗಲೇ ಅವನು ಅದರಿಂದ ಪಾರಾಗುವನು. ಕೈ ಒಡ್ಡಿದರೆ ಬದ್ಧರಾಗುವೆವು. ಆದರೆ ಯಾವಾಗ ಏನಾದರೂ ಬರಲಿ ನಾವು ತೆಗೆದುಕೊಳ್ಳದೇ ಇದ್ದರೆ ಅದರ ಪಾಡಿಗೆ ಅದು ಹೋಗುವುದು. "ಜ್ಞಾನಿಗಳು ಕರ್ಮದಿಂದ ಹುಟ್ಟಿದ ಫಲಗಳನ್ನು ಬಿಟ್ಟು ಜನ್ಮವೆಂಬ ಬಂಧನದಿಂದ ಬಿಡುಗಡೆ ಹೊಂದಿ. ಕ್ಲೇಶಶೂನ್ಯವಾದ ಪರಮಪದವನ್ನು ಹೊಂದುತ್ತಾರೆ". ಆಗಲೇ ಮನಸ್ಸು ಸಮಾಧಿಯಲ್ಲಿರುವುದು. ಇಂತಹ ಸ್ಥಿತಿಯನ್ನು ಮುಟ್ಟಿದವನೇ ಸ್ಥಿತಪ್ರಜ್ಞ.

ದುಃಖದ ಸಂಶಯದ ಬಿರುಗಾಳಿಯಿಂದ ತಾಡಿತನಾದ ಅರ್ಜುನ ಆ ಸ್ಥಿತಪ್ರಜ್ಞನ ಮನಸ್ಸಿನ ಸ್ವಭಾವವೇನು, ಅವನು ಪ್ರಪಂಚದಲ್ಲಿ ಹೇಗೆ ಇರುತ್ತಾನೆ, ಹೇಗೆ ವ್ಯವಹರಿಸುತ್ತಾನೆ ಎಂದು ಕೇಳಿಕೊಳ್ಳುವನು. ಶ್ರೀಕೃಷ್ಣ ಅರ್ಜುನನ ಮೇಲೆ ಕೃಪೆತೋರಿ

ಅದು ಎಂತಹುದು ಎಂಬುದನ್ನು ವಿವರಿಸುತ್ತಾನೆ. ಅದು ಏನು ಎಂಬುದು ಗೊತ್ತಾದರೆ ಅರ್ಜುನ ಈಗ ವಿಷಾದದಿಂದ ಯಾವ ಹಳ್ಳಕ್ಕೆ ಬಿದ್ದಿರುವನೋ ಅನಂತರ ಸ್ಥಿತಪ್ರಜ್ಞನ ಪ್ರಶಾಂತಿಯನ್ನು ಪಡೆಯುವುದಕ್ಕಾದರೂ ಮೇಲೆದ್ದು ಬರಲಿ ಎಂದು ಅವನ ಸ್ಥಿತಿಯನ್ನು ವಿವರಿಸುವನು:

"ಎಲೈ ಅರ್ಜುನ, ಆತ್ಮನಲ್ಲಿಯೇ ಆತ್ಮನಿಂದಲೇ ಸಂತುಷ್ಟನಾಗಿ ಯಾವಾಗ ಯೋಗಿಯು ಮನಸ್ಸಿನಲ್ಲಿರುವ ಸಮಸ್ತ ಕಾಮಗಳನ್ನು ತ್ಯಾಗಮಾಡುತ್ತಾನೆಯೋ ಆಗ ಸ್ಥಿತಪ್ರಜ್ಞನೆಂದು ಹೇಳಲ್ಪಡುವನು.

"ದುಃಖಗಳಲ್ಲಿ ಉದ್ವೇಗವಿಲ್ಲದ ಮನಸ್ಸುಳ್ಳವನೂ, ಸುಖದುಃಖಗಳಲ್ಲಿ ಆಸಕ್ತಿಯಿಲ್ಲದವನೂ, ಭಯಕ್ರೋಧಗಳಿಲ್ಲದವನೂ ಆದ ಮುನಿಯು ಸ್ಥಿತಪ್ರಜ್ಞನೆಂದು ಹೇಳಲ್ಪಡುವನು.

"ಯಾವನು ಸರ್ವ ವಸ್ತುಗಳಲ್ಲಿ ಆಸಕ್ತರಹಿತನಾಗಿ ಆಯಾ ಪ್ರಿಯ ಅಪ್ರಿಯ ವಿಷಯಗಳನ್ನು ಪಡೆದಾಗ ಸಂತೋಷಿಸುವುದಿಲ್ಲವೋ, ದ್ವೇಷಿಸುವುದಿಲ್ಲವೋ ಆತನ ಪ್ರಜ್ಞೆಯು ಸ್ಥಿರವಾಗಿರುವುದು.

"ಆಮೆಯು ತನ್ನ ಅಂಗಗಳನ್ನು ಒಳಕ್ಕೆ ಸೆಳೆದುಕೊಳ್ಳುವಂತೆ ಈ ಜ್ಞಾನನಿಷ್ಠನಾದ ಯೋಗಿಯು ಯಾವಾಗ ಎಲ್ಲಾ ಕಡೆಗಳಿಂದಲೂ ಇಂದ್ರಿಯಗಳನ್ನು ಅವುಗಳ ವಿಷಯದಿಂದ ಸೆಳೆದುಕೊಳ್ಳುವನೊ ಆಗ ಆತನ ಪ್ರಜ್ಞೆಯು ಸ್ಥಿರವಾಗಿರುವುದು.

"ನಿರಾಹಾರಿಯಾದ ದೇಹಿಯನ್ನು ತೊರೆದು ಇಂದ್ರಿಯಗಳ ವಿಷಯಗಳು ಹಿಂತಿರುಗುತ್ತವೆ. ಆದರೆ ತೃಷ್ಣೆ ಬಿಟ್ಟಿರುವುದಿಲ್ಲ. ಪರಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡಮೇಲೆ ಇವನ ತೃಷ್ಣೆಯೂ ಕೂಡ ಹಿಂತಿರುಗುವುದು.

"ಏಕೆ, ಅರ್ಜುನ, ವಿಕ್ಷೇಪವನ್ನುಂಟುಮಾಡುವ ಇಂದ್ರಿಯಗಳು ಪ್ರಯತ್ನಶೀಲನೂ ಜ್ಞಾನಿಯೂ ಆದ ಪುರುಷನ ಮನಸ್ಸನ್ನು ಕೂಡ ಬಲಾತ್ಕಾರದಿಂದ ಹರಣಮಾಡುವುವು.

"ಆದುದರಿಂದ ಇಂದ್ರಿಯಗಳನ್ನೆಲ್ಲ ನಿಗ್ರಹಿಸಿ ಮತ್ಪರಾಯಣನಾಗಿ ಸಮಾಹಿತಚಿತ್ತನಾಗಬೇಕು. ಏಕೆಂದರೆ, ಯಾವನ ಇಂದ್ರಿಯಗಳು ವಶದಲ್ಲಿರುವುವೋ ಅವನ ಪ್ರಜ್ಞೆ ಸ್ಥಿರವಾಗಿರುವುದು.

"ವಿಷಯವನ್ನು ಚಿಂತಿಸುತ್ತಿರುವ ಪುರುಷನಿಗೆ ಅವುಗಳಲ್ಲಿ ಆಸಕ್ತಿಯು ಹುಟ್ಟುತ್ತದೆ. ಆಸಕ್ತಿಯಿಂದ ಕಾಮ ಹುಟ್ಟುವುದು. ಕಾಮದಿಂದ ಕ್ರೋಧ ಹುಟ್ಟುತ್ತದೆ. ಕ್ರೋಧದಿಂದ ಸಮ್ಮೋಹ ಉಂಟಾಗುವುದು. ಸಮ್ಮೋಹದಿಂದ ಸ್ಮೃತಿಭ್ರಮೆಯುಂಟಾಗುವುದು. ಸ್ಮೃತಿಭ್ರಮೆಯಿಂದ ಬುದ್ಧಿನಾಶ. ಬುದ್ಧಿನಾಶದಿಂದ ಪುರುಷನು ನಾಶವಾಗುವನು.

"ರಾಗದ್ವೇಷಗಳಿಂದ ಬಿಡುಗಡೆಹೊಂದಿ ತನ್ನ ವಶದಲ್ಲಿರುವ ಇಂದ್ರಿಯಗಳಿಂದ ವಿಷಯಗಳನ್ನು ಅನುಭವಿಸುತ್ತಿರುವ ಸಮಾಹಿತಚಿತ್ತವುಳ್ಳ ಮನುಷ್ಯನು ಪ್ರಸನ್ನತೆಯನ್ನು ಹೊಂದುವನು.

"ಚಿತ್ತದ ಪ್ರಸನ್ನತೆಯುಂಟಾದರೆ ಅವನ ಸಮಸ್ತ ದುಃಖಗಳ ನಾಶ ಉಂಟಾಗುವುದು. ಏಕೆಂದರೆ ಚಿತ್ತಶುದ್ಧವುಳ್ಳವನ ಬುದ್ಧಿಯು ಶೀಘ್ರವಾಗಿ ಸ್ಥಿರವಾಗುವುದು.

"ಅಯುಕ್ತನಾದವನಿಗೆ ಬುದ್ಧಿಯೂ ಇರುವುದಿಲ್ಲ; ಅಯುಕ್ತನಾದವನಿಗೆ ಭಾವನೆಯೂ ಇರುವುದಿಲ್ಲ. ಭಾವನೆಯನ್ನು ಮಾಡದವನಿಗೆ ಶಾಂತಿಯಿಲ್ಲ. ಶಾಂತಿಯಿಲ್ಲದವನಿಗೆ ಸುಖವೆಲ್ಲಿ?

"ಚಲಿಸುತ್ತಿರುವ ಇಂದ್ರಿಯಗಳನ್ನು ಯಾವ ಮನಸ್ಸು ಅನುಸರಿಸುತ್ತಿದೆಯೋ, ಅದು ನೀರಿನಲ್ಲಿರುವ ದೋಣಿಯನ್ನು

(ಪ್ರತಿಕೂಲವಾಗಿರುವ) ಗಾಳಿಯು ಹೊಡೆದುಕೊಂಡು ಹೋಗುವಂತೆ ಇವನ ಪ್ರಜ್ಞೆಯನ್ನು ಅಪಹರಿಸುತ್ತದೆ.

"ಯಾವನು ತನ್ನ ಇಂದ್ರಿಯಗಳನ್ನು ಸರ್ವಪ್ರಕಾರದಿಂದಲೂ ಇಂದ್ರಿಯಗಳ ವಿಷಯಗಳಿಂದ ಸೆಳೆದು ನಿಗ್ರಹಿಸುತ್ತಾನೆಯೋ ಅವನ ಪ್ರಜ್ಞೆಯು ಸ್ಥಿರವಾಗಿರುವುದು.

"ಎಲ್ಲಾ ಪ್ರಾಣಿಗಳಿಗೆ ಯಾವುದು ರಾತ್ರಿಯೋ ಅದರಲ್ಲಿ ಜಿತೇಂದ್ರಿಯನು ಎಚ್ಚೆತ್ತಿರುವನು. ಯಾವುದರಲ್ಲಿ ಪ್ರಾಣಿಗಳು ಎಚ್ಚೆತ್ತಿರುವುವೋ ಅದು ನೋಡುತ್ತಿರುವ ಮುನಿಗೆ ರಾತ್ರಿ.

"ನದಿಯು ಹೇಗೆ ಪೂರ್ಣವಾಗಿರುವ ಅಚಲವಾಗಿರುವ ಸಮುದ್ರವನ್ನು ಪ್ರವೇಶಿಸುವುದೋ ಹಾಗೆಯೇ ಎಲ್ಲಾ ಕಾಮಗಳು ಯಾವನನ್ನು ಪ್ರವೇಶಿಸುವುವೋ ಅವನು ಶಾಂತಿಯನ್ನು ಹೊಂದುತ್ತಾನೆ. ಕಾಮಗಳನ್ನು ಬಯಸುವವನು ಅದನ್ನು ಹೊಂದಲಾರನು.

"ಯಾವ ಪುರುಷನು ಕಾಮಗಳನ್ನೆಲ್ಲಾ ಬಿಟ್ಟು, ಆಸೆಯಿಲ್ಲದವನಾಗಿ ಮಮತೆಯಿಲ್ಲದವನಾಗಿ ಅಹಂಕಾರವಿಲ್ಲದವನಾಗಿ ತಿರುಗುತ್ತಿರುವನೋ ಅವನು ಶಾಂತಿಯನ್ನು ಹೊಂದುತ್ತಾನೆ.

"ಎಲೈ ಅರ್ಜುನ, ಇದು ಬ್ರಹ್ಮದಲ್ಲಿರುವ ಸ್ಥಿತಿ. ಇದನ್ನು ಹೊಂದಿ ಯಾರೂ ಮರುಳಾಗುವುದಿಲ್ಲ. ಕೊನೆಯ ವಯಸ್ಸಿನಲ್ಲಿ ಕೂಡ ಈ ಸ್ಥಿತಿಯಲ್ಲಿದ್ದು ಬ್ರಹ್ಮನಿರ್ವಾಣವನ್ನು ಹೊಂದುತ್ತಾರೆ".

ಸ್ಥಿತಪ್ರಜ್ಞನ ಲಕ್ಷಣವೆನ್ನುವುದು ಗೀತೆಯಲ್ಲೆಲ್ಲಾ ಬರುವ ಒಂದು ಅತ್ಯಂತ ಸುಂದರವಾದ ಭಾವದ ಗೊಂಚಲು. ಜ್ಞಾನಿ ಈ ಸಂಸಾರದಲ್ಲಿದ್ದರೂ ಇದಕ್ಕೆ ಹೇಗೆ ಸೇರಿಲ್ಲವೋ, ಅವನು ಎಲ್ಲಾ ವ್ಯವಹಾರವನ್ನು ನಡಸುತ್ತಿದ್ದರೂ ಆಸಕ್ತಿಯನ್ನು ತೊರೆ

ದಿರುವನೋ ಅದನ್ನು ಶ್ರೀಕೃಷ್ಣ ವಿವರಿಸುವನು. ಇಂತಹ ಅನುಭವದ ಶಿಖರಕ್ಕೆ ಅರ್ಜುನ ಏರಬೇಕೆಂದು ಬಯಸುವನು.

## ೪. ಯಜ್ಞದೃಷ್ಟಿ

ಶ್ರೀಕೃಷ್ಣ ಅರ್ಜುನನಿಗೆ ಯಜ್ಞದೃಷ್ಟಿಯಿಂದ ಕರ್ಮಮಾಡು. ಆಗ ಅದು ನಿನ್ನನ್ನು ಬಂಧಿಸುವುದಿಲ್ಲ ಎಂದು ಹೇಳಿ ಅದರ ಭಾವನೆಯನ್ನು ವಿಸ್ತರಿಸಿ ಇಡೀ ಬ್ರಹ್ಮಾಂಡವೇ ಹೇಗೆ ಯಜ್ಞದ ಭಾವನೆಯ ಮೇಲೆ ನಿಂತಿದೆ ಎಂಬುದನ್ನು ವಿವರಿಸುವನು.

"ಪ್ರಜಾಪತಿ ಯಜ್ಞಗಳೊಂದಿಗೆ ಪ್ರಜೆಯನ್ನು ಸೃಷ್ಟಿಸಿ. ಪ್ರಜೆಗಳಿಗೆ ನೀವು, ಯಜ್ಞದಿಂದ ವೃದ್ಧಿಯಾಗಿ, ಅದು ನಿಮ್ಮ ಬಯಕೆಗಳನ್ನು ಈಡೇರಿಸುವ ಕಾಮಧೇನುವಾಗಲಿ" ಎನ್ನು ವನು. ಸೃಷ್ಟಿಯ ಆದಿಯಲ್ಲಿ ಸೃಷ್ಟಿಕರ್ತನು ಜೊತೆ ಜೊತೆ ಯಲ್ಲಿಯೇ ಪ್ರಜೆಗಳು ಮತ್ತು ಯಜ್ಞವನ್ನು ಸೃಷ್ಟಿಸಿದನು ಎಂದು ಹೇಳಿದೆ. ನಾವು ಬೆಳೆಯಬೇಕು, ವೃದ್ಧಿಯಾಗಬೇಕು. ಹಾಗೆ ಆಗಬೇಕಾದರೆ ಒಂದು ಮಾರ್ಗವನ್ನು ತೋರುತ್ತಾನೆ. ಆ ಮಾರ್ಗವೇ ಯಜ್ಞದ ಭಾವನೆಯನ್ನು ನಮ್ಮ ಮನಸ್ಸಿನಲ್ಲಿ ಇಟ್ಟುಕೊಂಡು, ನಮ್ಮ ಪಾಲಿನ ಕರ್ತವ್ಯಗಳನ್ನು ನೆರವೇರಿಸು ವುದು. ಆಗ ಆ ವ್ಯಕ್ತಿಯಾಗಲಿ, ಸಮಾಜವಾಗಲಿ ಮುಂದು ವರಿಯುತ್ತದೆ. ಪ್ರಪಂಚದಲ್ಲಿ ಅದನ್ನು ಧ್ವಂಸಮಾಡಲು ಯಾವ ಶಕ್ತಿ ಬರಲಿ ಅದನ್ನು ಎದುರಿಸಿ ಸೋಲಿಸಬಲ್ಲದು ಆಗ. ಒಂದು ಜನಾಂಗದ ಶಕ್ತಿ ಇರುವುದೇ ಈ ಯಜ್ಞದ ದೃಷ್ಟಿಯಲ್ಲಿ. ಎಲ್ಲಿ ಇದು ಮಾಯವಾಗಿದೆಯೋ ಅಲ್ಲಿ ಆ ಜನಾಂಗವನ್ನು ರಕ್ಷಿಸಲು ಬೇಕಾದಷ್ಟು ಸೇನೆ ಮತ್ತು ಸಾಮಗ್ರಿಗಳು ಇದ್ದರೂ ಅದು

ಬಹುಬೇಗ ನಾಶವಾಗುವುದು. ನಾವು ಯಾವುದನ್ನು ಸನಾತನ ಧರ್ಮವೆನ್ನುವೆವೊ ಅದರಲ್ಲಿ ಈ ಶಕ್ತಿ ಸುಪ್ತವಾಗಿದೆ. ನಮ್ಮ ಆಶೆ ಆಕಾಂಕ್ಷೆಗಳನ್ನು ಈಡೇರಿಸುವ ಕಾಮಧೇನುವಾಗುವುದು ಯಜ್ಞ. ಈ ಯಜ್ಞದೃಷ್ಟಿ ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಕರುಣಿಸಬಲ್ಲದು. ಪ್ರಪಂಚವನ್ನು ಅನುಭವಿಸಬೇಕು ಎಂಬ ಹಂಬಲವಿರುವವನಿಗೆ ಅದನ್ನು ಅನುಭವಿಸಬೇಡ ಎನ್ನುವುದಿಲ್ಲ ಯಜ್ಞ. ಯಾವ ರೀತಿ ಅನುಭವಿಸಬೇಕೊ ಆ ರಹಸ್ಯವನ್ನು ತಿಳಿದುಕೊಂಡು ಅನುಭವಿಸು ಎನ್ನುವುದು. ಮಾನವನಲ್ಲಿ ಲಿಂಗಾಸಕ್ತಿ ಮತ್ತು ಅಧಿಕಾರಾಸಕ್ತಿ ಎಂಬ ಎರಡು ಪ್ರಬಲವಾದ ಆಕರ್ಷಣೆಗಳಿವೆ. ಅದನ್ನು ತಡೆಗಟ್ಟು ಎನ್ನುವ ಬದಲು, ಅದನ್ನು ಅನುಭವಿಸುವ ದೃಷ್ಟಿ ಬದಲಾವಣೆ ಆಗಲಿ ಎನ್ನುವುದು. ನಮ್ಮ ಕಾಮಾಸಕ್ತಿಯನ್ನು ತೃಪ್ತಿಪಡಿಸಿಕೊಳ್ಳಲು ಯಾರನ್ನೊ ಕೂಡಿ ಮೃಗೀಯ ತೃಷೆಯನ್ನು ಪೂರೈಸಿಕೊಂಡು ರೋಗರುಜಿನ ಗಳಿಗೆ ತುತ್ತಾಗುವ ಬದಲು, ಅಗ್ನಿಸಾಕ್ಷಾತ್ಕಾರವಾಗಿ ಒಬ್ಬ ಪುರುಷ ಸ್ತ್ರೀಯನ್ನು ವರಿಸಿ, ಒಬ್ಬರು ಮತ್ತೊಬ್ಬರಿಗಾಗಿ ಎಂಬ ದೃಷ್ಟಿಯಿಂದ ಮನೆಮಾಡಿ, ಸಮಾಜದಲ್ಲಿ ಒಂದು ಗೌರವಸ್ಥಾನ ದಲ್ಲಿರುವುದು. ಇದರಿಂದ ನಮ್ಮ ಮೃಗೀಯ ಆಸೆಗಳು ಕಡಿಮೆಯಾಗಿ, ಪರಿಶುದ್ಧರಾಗಲು ಮತ್ತು ಸ್ವಾರ್ಥತೆಯಿಂದ ಪಾರಾಗಲು ಸಹಾಯಮಾಡುವುದು. ಇದರಂತೆಯೇ ಅಧಿಕಾರ ಲಾಲಸೆ. ಯಾರಲ್ಲಿ ಈ ಬಯಕೆ ಇದೆಯೋ ಅವರು ಬೇಕಾದರೆ ಇದನ್ನು ತೃಪ್ತಿಪಡಿಸಿಕೊಳ್ಳಲಿ. ಆದರೆ ಅಧಿಕಾರವನ್ನು ನ್ಯಾಯ ವಾಗಿ ಸಂಪಾದಿಸಲಿ. ಅದರಿಂದ ಎಲ್ಲರಿಗೂ ಒಳ್ಳೆಯದನ್ನು ಮಾಡಲು ಯತ್ನಿಸಲಿ. ಅಧಿಕಾರವನ್ನು ಪಡೆಯುವುದು ಒಂದು ಭೋಗಕ್ಕಲ್ಲ. ಅದೊಂದು ದೊಡ್ಡ ಜವಾಬ್ದಾರಿ ಎನ್ನುವುದನ್ನು

ಅರಿತು ಕೆಲಸಮಾಡಲಿ. ಆಗ ಇವನು ಮಾಡುವ ಕೆಲಸ ಒಂದು ಯಜ್ಞವಾಗುವುದು.

"ನೀವು ಯಜ್ಞದ ಮೂಲಕ ದೇವರನ್ನು ತೃಪ್ತಿಪಡಿಸಿದರೆ ಆ ದೇವತೆಗಳು ನಿಮ್ಮನ್ನು ಪ್ರೋಷಿಸುವರು. ಪರಸ್ಪರ ಭಾವನೆ ಇದ್ದರೆ ಪರಮಶ್ರೇಯಸ್ಸು ಸಿದ್ಧಿಸುವುದು. ಯಜ್ಞದಿಂದ ತೃಪ್ತರಾದ ದೇವತೆಗಳು ನಿಮಗೆ ಇಷ್ಟವಾದ ಭೋಗಗಳನ್ನು ಕರುಣಿಸುವರು. ಅವರಿಂದ ಅನುಗ್ರಹಿಸಲ್ಪಟ್ಟ ಭೋಗವನ್ನು, ಅವರಿಗೆ ಕೊಡದೆ ಯಾರು ತಾವೇ ಅನುಭವಿಸುವರೊ ಅವರು ಕಳ್ಳರು" ಗೀತೆಯಲ್ಲಿ ನಾವು ಈ ವಾಣಿಯನ್ನು ಕೇಳುತ್ತೇವೆ.

ನಾವು ದೇವರಲ್ಲಿ ಏನನ್ನು ಕೇಳುತ್ತೇವೆಯೊ ಅವನು ಅದನ್ನು ಕರುಣಿಸುವನು. ಆದರೆ ಅವನನ್ನು ಕೇಳುವಾಗ ಯಜ್ಞದ ಮೂಲಕ ಅವನನ್ನು ಕೇಳಬೇಕು. ಅವನಿಗೆ ಒಂದು ರೀತಿಯಿಂದ ಕೊಟ್ಟು ಕೇಳಬೇಕು. ಹಾಗೆಯೇ ಕೇಳುವುದಲ್ಲ. ನಮ್ಮಂತಹ ಬಡ ಮಾನವರು ದೇವರಿಗೆ ಕೊಡುವುದಾದರೂ ಏನಿದೆ ಎಂದು ಕೇಳಬಹುದು. ನಮ್ಮಲ್ಲಿ ಏನಿದೆಯೋ ಆ ಅಲ್ಪವನ್ನೇ ಅವನು ಸ್ವೀಕರಿಸುವನು. ಬಡ ವಿದುರನ ಒಂದು ಕುಡಿಕೆ ಹಾಲನ್ನು ಅವನು ಸ್ವೀಕರಿಸಲಿಲ್ಲವೆ? ಕುಚೇಲನ ಒಣ ಅವಲಕ್ಕಿಯನ್ನು ಅವನು ಸ್ವೀಕರಿಸಲಿಲ್ಲವೆ? ನಾವು ಕೊಡುವಾಗ ನಮ್ಮಲ್ಲಿರುವ ಅಲ್ಪಕ್ಕಾಗಿ ನಾವು ನಾಚಬೇಕಾಗಿಲ್ಲ. ನಾವು ಏನನ್ನು ಕೊಟ್ಟರೂ ಅವನು ಸ್ವೀಕರಿಸುವನು. ನಿಮಿತ್ತವಾಗಿ ನಾವು ಏನನ್ನಾದರೂ ಕೊಟ್ಟು ಕೇಳಿದರೆ, ದೇವರು ಅದನ್ನು ಕೊಡುವನು. ಅವನು ಕೊಟ್ಟಾದಮೇಲೆ ಪುನಃ ಅದನ್ನು ಅವನಿಗೆ ಅರ್ಪಿಸಿ ಪ್ರಸಾದವಾಗಿ ತೆಗೆದುಕೊಳ್ಳಬೇಕು. ಅವನಿಗೆ ಅರ್ಪಿಸದೆ ನಾವು ಹಾಗೆಯೇ ತೆಗೆದುಕೊಂಡರೆ ಕಳ್ಳ

ರಾಗುವೆವು. ನಾವು ಕೇಳುವಾಗಲೇ ಏನನ್ನೊ ಕೊಟ್ಟು ಕೇಳಿ ದೆವು. ಅದಕ್ಕೆ ಅವನು ಕೊಟ್ಟನು. ಅಂದರೆ, ಅವನು ಕೊಟ್ಟು ದಕ್ಕೆ ಮುಂಚೆಯೇ ನಾವು ಬೇರೊಂದು ರೀತಿಯಲ್ಲಿ ಕೊಟ್ಟಿರು ದೆವು. ಮತ್ತೆ ಪುನಃ ಅವನಿಗೆ ಅರ್ಪಿಸಿ ಕೃತಜ್ಞತೆ ತೋರಿಸಿ ಪತಕ್ಕೆ ಅನುಭವಿಸಬೇಕು ಎಂದು ನಾವು ಪ್ರಶ್ನಿಸಬಹುದು. ಆದರೆ ನಾವು ಕೊಟ್ಟ ಬೆಲೆ ನಿಜವಾದ ಬೆಲೆಯೋ ಅಥವಾ ನೆಪಮಾತ್ರಕ್ಕೆ ಕೊಟ್ಟದ್ದೋ ಅದನ್ನು ವಿಚಾರಿಸಬೇಕಾಗಿದೆ. ನಾವೊಂದು ಬೀಜವನ್ನು ನೆಲಕ್ಕೆ ಬಿತ್ತುವೆವು. ದೇವರು ಮಳೆ ಬಿಸಿಲು ಗಾಳಿ ಎಲ್ಲವನ್ನೂ ಕೊಟ್ಟು ಅದನ್ನು ಬೆಳಸಿ ಅದರಿಂದ ಸಾವಿರಾರು ಕಾಳುಗಳನ್ನಾಗಿ ಮಾಡುವನು. ನಾವು ಅದನ್ನು ತೆಗೆದುಕೊಳ್ಳುವಾಗ ಒಂದನ್ನು ಸಾವಿರ ಮಾಡಿದವನನ್ನು ಸ್ತುತಿಸ ಬೇಡವೆ? ಇದೆಲ್ಲ ಅವನ ಅನುಗ್ರಹದಿಂದ ಆಯಿತು ಎಂದು ಕೃತಜ್ಞತೆಯಿಂದ ನಾವು ಅವನ ಪಾದವಡಿ ಬೀಳಬೇಡವೆ?

ದೇವರು ನಮ್ಮಿಂದ ಒಂದನ್ನು ತೆಗೆದುಕೊಂಡು ಅದನ್ನು ಸಾವಿರಾರು ಮಾಡಿ ಹಿಂತಿರುಗಿ ಕೊಡುವಾಗ, ನಮ್ಮಿಂದ ಆ ಒಂದನ್ನಾದರೂ ಏಕೆ ವಸೂಲಿ ಮಾಡಬೇಕು, ಅವನು ಹಾಗೆಯೇ ಕೊಡಲಾರನೆ? ಎಂದು ಕೇಳಬಹುದು. ಹೌದು ಅವನು ಹಾಗೆಯೂ ಕೊಡಬಲ್ಲ. ಮನುಷ್ಯ ಉತ್ತು ಬಿತ್ತುವುದನ್ನು ಅನಂತರ ಕಲಿತದ್ದು. ಅದಕ್ಕಿಂತ ಮುಂಚೆ ಪ್ರಕೃತಿಯೇ ನಮಗೆ ಅದನ್ನೆಲ್ಲ ಮಾಡುತ್ತಿತ್ತು. ಆದರೆ ಜೀವನದಲ್ಲಿ ಹಾಗೆಯೇ ಬಂದರೆ ನಮಗೆ ಅದರ ಬೆಲೆ ಗೊತ್ತಾಗುವುದು ಬಹಳ ಅಪರೂಪ. ಅದೂ ಅಲ್ಲದೆ ನಾವು ಕೊಡುವುದನ್ನು ಕಲಿಯುವುದಾವಾಗ? ಕೊಡುವುದನ್ನು ಕಲಿಸುವುದಕ್ಕೆ, ನಮ್ಮ ಸ್ವಾರ್ಥವನ್ನು ಸ್ವಲ್ಪ ಮಟ್ಟಿಗಾದರೂ ಕಡಿಮೆಮಾಡಲು, ಅವನು ನಮಗೆ ಯಜ್ಞದ ಮೂಲಕ ಕೇಳಿ, ಯಜ್ಞದ ಮೂಲಕ ಅನುಭವಿಸಿ ಎನ್ನುವನು.

ಸೃಷ್ಟಿಚಕ್ರ ಹೇಗೆ ನಿಂತಿದೆ ಎಂಬುದನ್ನು ಶ್ರೀಕೃಷ್ಣ ಸುಂದರವಾಗಿ ವಿವರಿಸುವನು. "ಅನ್ನದಿಂದ ಪ್ರಾಣಗಳು ಉತ್ಪನ್ನವಾಗಿವೆ. ಮಳೆಯಿಂದ ಅನ್ನ ಉಂಟಾಗುವುದು. ಯಜ್ಞದಿಂದ ಮಳೆ ಆಗುವುದು. ಕರ್ಮದಿಂದ ಯಜ್ಞವಾಗುವುದು. ಕರ್ಮ ಬ್ರಹ್ಮದಿಂದ ಆಗುವುದು. ಬ್ರಹ್ಮ ಅಕ್ಷರದಿಂದ ಉದ್ಭವಿಸುವುದು. ಆದಕಾರಣ ಸರ್ವವ್ಯಾಪಿಯಾದ ಬ್ರಹ್ಮ ಸದಾ ಯಜ್ಞದಲ್ಲಿ ಪ್ರತಿಷ್ಠಿತವಾಗಿರುವುದು. ಈ ರೀತಿಯಾಗಿ ಪ್ರವರ್ತಿಸಲ್ಪಟ್ಟ ಜಗಚ್ಚಕ್ರವನ್ನು ಯಾರು ಇಲ್ಲಿ ಅನುಸರಿಸುವುದಿಲ್ಲವೋ ಅವರು ಪಾಪಾಯುವೂ ಇಂದ್ರಿಯಾರಾಮರೂ ಆಗಿ ಅವರ ಬಾಳು ವ್ಯರ್ಥವಾಗುವುದು".

ನಾವು ಎಂದು ಭೂಮಿಗೆ ಬರುತ್ತೇವೆಯೋ ಅಂದಿನಿಂದ ಇಡೀ ಬ್ರಹ್ಮಾಂಡ ಒಂದಲ್ಲ ಒಂದು ರೀತಿಯಲ್ಲಿ ಕೊಡುತ್ತಿದೆ. ಅದು ಕೊಟ್ಟುದನ್ನು ತಿಂದು ನಾವು ಬೆಳೆಯುತ್ತಿರುವೆವು. ಪಂಚ ಭೂತಗಳು. ಎಲ್ಲಾ ಬಗೆಯ ಜೀವಜಂತುಗಳು ನಮಗೆ ಸಹಾಯ ಮಾಡುತ್ತಿವೆ. ನಾವು ಅವರಿಂದ ತೆಗೆದುಕೊಳ್ಳುವುದು ಒಂದು ಸಾಲ ಮಾಡಿದಂತೆ. ನಾವು ಆ ಸಾಲವನ್ನು ಸಾಧ್ಯವಾದಷ್ಟು ತೀರಿಸಬೇಕು. ಅದಕಾರಣವೇ ನಮ್ಮ ಹಿಂದಿನವರು ಪ್ರತಿಯೊಬ್ಬ ಹಿಂದೂವೂ ಪಂಚಯಜ್ಞಗಳನ್ನು ಮಾಡಬೇಕೆಂದು ಹೇಳುತ್ತಿದ್ದರು. ದೇವಯಜ್ಞ: ನಾವು ಇಲ್ಲಿರುವುದಕ್ಕೆ ಏನು ಬೇಕೊ ಅದನ್ನೆಲ್ಲ ಅಣಿಮಾಡಿ, ಬಂದ ಮೇಲೆಯೂ ಯಾವ ಯಾವ ಕಾಲಕ್ಕೆ ಏನು ಬೇಕೋ ಅದನ್ನೆಲ್ಲ ಒದಗಿಸುತ್ತಿರುವನು ದೇವರು. ಅವನಿಗೆ ಪ್ರಾರ್ಥಿಸುವುದೊಂದು ಯಜ್ಞ. ಪಿತೃಯಜ್ಞ: ನಮ್ಮ ಈಗಿನ ಸ್ಥಿತಿಗೆ ನಮ್ಮ ಪಿತೃಗಳು ದುಡಿದಿರುವರು. ಈಗ ಅವರು ನಮ್ಮ ಕಣ್ಣಮುಂದೆ ಇಲ್ಲದೇ ಇರಬಹುದು. ಅವರು ಯಾವ

ಲೋಕವಲ್ಲಾದರೂ ಇರಲಿ, ಯಾವ ದೇಹವನ್ನಾದರೂ ಧರಿಸಿರಲಿ, ಅವರಿಗೆ ಒಳ್ಳೆಯದಾಗಲೆಂದು ಪ್ರಾರ್ಥಿಸಬೇಕು. ಋಷಿಯಜ್ಞ: ಹಿಂದಿನ ಮಹಾಋಷಿಗಳು, ಆಧ್ಯಾತ್ಮಿಕ ವೀರರು, ನಮಗೆ ಜ್ಞಾನನಿಧಿಯನ್ನು ಸಂಗ್ರಹಿಸಿಟ್ಟು ಹೋಗಿರುವರು. ಅದನ್ನು ಓದಿ ತಿಳಿದುಕೊಳ್ಳಬೇಕು. ನಾವು ತಿಳಿದುಕೊಂಡದ್ದನ್ನು ಇತರರಿಗೆ ಹೇಳಬೇಕು. ಇದೇ ಋಷಿಯಜ್ಞದ ಸಾರ. ನಾವು ಅವರನ್ನು ಕೊಂಡಾಡುವಾಗ ಅಲ್ಲಿ ಅವರಿಗೆ ತೃಪ್ತಿಯಾಗುವುದು. ಯಾವ ಜ್ಞಾನವನ್ನು ಅವರು ನಮಗಾಗಿ ಬಿಟ್ಟಿರುವರೋ, ಅದನ್ನು ನಾವು ಸರಿಯಾಗಿ ತಿಳಿದುಕೊಂಡಾಗ ಮಾತ್ರ, ಇತರರಿಗೆ ಅದನ್ನು ಹೇಳಿದಾಗ ಮಾತ್ರ ನಾವು ನಿಜವಾಗಿ ಋಷಿಋಣವನ್ನು ತೀರಿಸು ತ್ತಿರುವೆವು. ನೃಯಜ್ಞ: ಈಗಿನ ನಮ್ಮ ಜೀವನ ಸುಸೂತ್ರವಾಗಿ ಸಾಗಬೇಕಾದರೆ, ನಮಗಾಗಿ ಉಳಿದವರೆಲ್ಲ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ದುಡಿಯುತ್ತಿರುವರು. ಅವರಿಂದ ನಾವು ಸ್ವೀಕರಿ ಸುತ್ತಿರುವೆವು. ಒಂದು ಚೂರು ಬಟ್ಟೆಯನ್ನು ಹೊದ್ದಿರಲಿ, ಒಂದು ತುತ್ತು ಅನ್ನವನ್ನು ನಾವು ತಿನ್ನಲಿ, ಒಂದು ಗೇಣುದ್ದ ನೆಲದಮೇಲೆ ನಾವಿರಲಿ ಇತರರಿಗೆ ಋಣಿಗಳು. ನಾವು ಪ್ರಪಂಚಕ್ಕೆ ಬರುವಾಗಲೇ ತೆರೆದ ಕೈಗಳಿಂದ ಬರುವೆವು. ಎಲ್ಲಾ ಕಡೆಗಳಿಂದಲೂ ಸ್ವೀಕರಿಸುತ್ತಿರುವೆವು. ನಾನು ಯಾಗ ನನ್ನ ಪಾಲಿನದನ್ನು ಮಾನವಕೋಟಿಗೆ ಹಿಂತಿರುಗಿ ಕೊಡುವೆನೊ ಅದೇ ನೃಯಜ್ಞ. ಅದರಂತೆ ಭೂತಯಜ್ಞ: ಮಾನವ ಮಾತ್ರ ವಲ್ಲ ತಿರ್ಯಗ್‌ಜಂತುಗಳು, ಸಣ್ಣ ಕ್ರಿಮಿಕೀಟಗಳು, ಎಲ್ಲವೂ ಮಾನವನಿಗೆ ಹಲವು ರೀತಿಯಲ್ಲಿ ಸಹಾಯಮಾಡುತ್ತಿವೆ. ಅವು ಗಳಿಗೆ ನಾವು ಮಾಡುವ ಆರೈಕೆ, ಅವುಗಳಿಗೆ ನಾವು ತೋರುವ ಪ್ರೀತಿ ಇವೆಲ್ಲ ಒಂದು ಯಜ್ಞ. ಆದಕಾರಣ ಹಿಂದೂವಿನ

ಬಾಳು ಯಜ್ಞದಮೇಲೆ ನಿಂತ ಬಾಳು. ಎಂದು ನಾವು ಯಜ್ಞದ ದೃಷ್ಟಿಯನ್ನು ಮರೆಯುವೆವೋ. ಕೇವಲ ನಮಗಾಗಿ ಬಾಳುವೆವೋ, ಆ ಬಾಳು ಸ್ವಾರ್ಥ, ಶೋಚನೀಯ. ವ್ಯರ್ಥ.

ಈ ವಿರಾಟ್ ಯಜ್ಞಕ್ಕೆ ಎಲ್ಲರೂ ಅರ್ಪಣೆ ಮಾಡಬೇಕು. ಆದರೆ ಎಲ್ಲರೂ ಒಂದೇ ವಸ್ತುವನ್ನು ಅರ್ಪಣೆಮಾಡಬೇಕೆಂದು ಅಲ್ಲ. ಯಾರಲ್ಲಿ ಯಾವ ವಿಧವಾದ ಒಳ್ಳೆಯದು ಇದೆಯೋ ಅದನ್ನು ಇತರರ ಸೇವೆಗೆ ನೀಡಬೇಕು. ಹಲವು ವಿಧದ ಯಜ್ಞಗಳಿವೆ ಎಂದು ಶ್ರೀಕೃಷ್ಣ ಗೀತೆಯಲ್ಲಿ ಹೇಳುವನು. "ಕೆಲವರು ದ್ರವ್ಯದಾನರೂಪದ ಯಜ್ಞವನ್ನು ಮಾಡುತ್ತಾರೆ. ತಪೋರೂಪವಾದ ಯಜ್ಞವನ್ನು ಕೆಲವರು ಮಾಡುತ್ತಾರೆ. ಸ್ವಾಧ್ಯಾಯ ಮತ್ತು ಜ್ಞಾನರೂಪದ ಯಜ್ಞವನ್ನು ಕೆಲವರು ಮಾಡುತ್ತಾರೆ. ಇವರೆಲ್ಲರೂ ದೃಢವ್ರತರಾದ ಯತಿಗಳು".

ನಾವು ಏನನ್ನು ಕೊಡುತ್ತೇವೆಯೊ ಅದಲ್ಲ ಮುಖ್ಯ. ಅದನ್ನು ಯಜ್ಞದೃಷ್ಟಿಯಿಂದ ಕೊಡುತ್ತೇವೆಯೆ ಎಂಬುದನ್ನು ನೋಡಬೇಕು. ನಾವು ಯಜ್ಞದೃಷ್ಟಿಯಿಂದ ಕೇವಲ ಲೌಕಿಕ ವಸ್ತುವನ್ನೇ ಮತ್ತೊಬ್ಬನಿಗೆ ಕೊಡಬಹುದು. ಆದರೂ ಅದರಿಂದ ಪರಮಜ್ಞಾನ ಪ್ರಾಪ್ತವಾಗುವುದು. ಶ್ರೇಷ್ಠವಾದ ಅಧ್ಯಾತ್ಮಿಕ ವಸ್ತುವನ್ನು ಕೊಟ್ಟರೆ ನಮ್ಮ ಜೀವನದಮೇಲೆ ಯಾವ ಪರಿಣಾಮವಾಗುವುದೋ ಅದೇ ಪರಿಣಾಮ ಯಜ್ಞದೃಷ್ಟಿಯಿಂದ ರೋಗಿಗೆ ಔಷಧಿ ಕೊಡಲಿ. ನಿರ್ಗತಿಕನಿಗೆ ಕೂಳು ಕೊಡಲಿ. ನಿರಕ್ಷರಸ್ಥನಿಗೆ ವಿದ್ಯೆ ಕೊಡಲಿ ಪ್ರಾಪ್ತವಾಗುವುದು. ಅದನ್ನೇ ಶ್ರೀಕೃಷ್ಣ "ಸರ್ವ ಕರ್ಮಗಳೂ ಕೊನೆಗೆ ಜ್ಞಾನದಲ್ಲಿ ಪರಿಸಮಾಪ್ತಿಯಾಗುವುವು" ಎಂದು ಹೇಳುತ್ತಾನೆ.

"ಯಜ್ಞಕ್ಕೋಸುಗ ಮಾಡದೆ ಇರುವ ಕರ್ಮಗಳು ನಮ್ಮನ್ನು

ಬಂಧಿಸುವುವು". ಯಾವಾಗ ಯಜ್ಞಭಾವನೆಯನ್ನು ಮರೆಯು ತ್ತೇವೆಯೋ, ಆಗ ನಾವು ಪ್ರಪಂಚದಲ್ಲಿ ಒಳ್ಳೆಯ ಕೆಲಸಗಳನ್ನೆ ಮಾಡುತ್ತಿರಬಹುದು, ವೇದಾಂತದ ವಿಷಯಗಳನ್ನೇ ಇತರರಿಗೆ ಬೋಧಿಸುತ್ತಿರಬಹುದು. ಆದರೂ ಕೀರ್ತಿ ಮುಂತಾದ ಪಿಶಾಚಿ ಗಳು ನಮ್ಮನ್ನು ಮೆಟ್ಟಿಕೊಳ್ಳುವುವು. ಆದಕಾರಣ ಒಳ್ಳೆಯ ಕೆಲಸಮಾಡುವುದು, ಒಳ್ಳೆಯ ವಿಷಯಗಳನ್ನು ಜನರಿಗೆ ಬೋಧಿ ಸುವುದು ಇವೇ ದೊಡ್ಡದಲ್ಲ. ಯಾವ ದೃಷ್ಟಿಯಿಂದ ಅದನ್ನು ಮಾಡುತ್ತಿರುವೆವು ಎಂಬುದನ್ನು ಗಮನಿಸಬೇಕು.

"ಅಮೃತವೆಂಬ ಹೆಸರುಳ್ಳ ಯಜ್ಞಶೇಷವನ್ನು ಯಾರು ಸೇವಿಸುವರೊ ಅವರು ಸನಾತನವಾದ ಬ್ರಹ್ಮವನ್ನು ಹೊಂದು ತ್ತಾರೆ". ಅಮೃತವೆಂದರೆ ಹಿಂದೆ ದೇವಾಸುರರು ಸಾಗರ ಕಡೆದಾಗ ಸಿಕ್ಕಿದ್ದು. ದೇವತೆಗಳು ಅದನ್ನು ಕುಡಿದು ಅಮೃತ ರಾದರು ಎಂದು ಪುರಾಣದಲ್ಲಿ ಓದುತ್ತೇವೆ. ಆದರೆ ಸನಾತನ ಬ್ರಹ್ಮನಲ್ಲಿ ಒಂದಾಗಬೇಕಾದರೆ, ಜನನ ಮರಣಗಳ ಕೋಟಲೆ ಯಿಂದ ಪಾರಾಗಬೇಕಾದರೆ, ಯಾವ ಸಾಗರವನ್ನೂ ಕಡೆಯ ಬೇಕಾಗಿಲ್ಲ. ಅದರಿಂದ ಬರುವ ಯಾವ ಅಮೃತವನ್ನೂ ಪಾನ ಮಾಡಬೇಕಾಗಿಲ್ಲ. ನಮ್ಮ ಪಾಲಿಗೆ ಯಾವ ಕರ್ತವ್ಯವೇ ಬರಲಿ, ಅದರಿಂದ ಬರುವ ಫಲ ಭಗವಂತನಿಗೆ ಅರ್ಪಿತವಾಗಲಿ ಎಂದು ಮಾಡಿದರೆ, ಅದೊಂದು ಯಜ್ಞವಾಗುವುದು. ಕೊನೆಗೆ ಏನು ಉಳಿಯುವುದೊ ಅದನ್ನು ಪ್ರಸಾದದಂತೆ ಸ್ವೀಕರಿಸಿದರೆ ಅದೇ ಅಮೃತವಾಗಿ ನಮ್ಮನ್ನು ಸನಾತನ ಬ್ರಹ್ಮನ ಸ್ಥಿತಿಗೆ ಒಯ್ಯುವುದು.

"ಯಜ್ಞ ಮಾಡದವನಿಗೆ ಇಹದಲ್ಲೇ ಸುಖವಿಲ್ಲ. ಇನ್ನು ಪರದಲ್ಲಿ ಹೇಗೆ ಸುಖ ಪ್ರಾಪ್ತಿಯಾಗುವುದು?" ಈ ಪ್ರಪಂಚ ದಲ್ಲಿ ನಾವು ಸುಖವಾಗಿರುವುದು ಕೊಟ್ಟು ತೆಗೆದುಕೊಳ್ಳುವುದರ

ಮೇಲೆ ಇರಬೇಕು. ಸಾಧ್ಯವಾದಷ್ಟು ಹೆಚ್ಚನ್ನು ಕೊಟ್ಟು, ಸಾಧ್ಯವಾದಷ್ಟು ಕಡಿಮೆಯನ್ನು ಸ್ವೀಕರಿಸುವುದೇ ಆನಂದದ ಮೂಲ. ಎಲ್ಲಿ ನಾವು ಕೊಡುವಾಗ ಗೊಣಗಾಡುವೆವೊ, ವಿಧಿ ಇಲ್ಲದೇ ಬಂದಾಗ ಸಾಧ್ಯವಾದಷ್ಟು ಕಡಿಮೆ ಕೊಡುವೆವೊ, ಅವರಿಂದ ಅದಕ್ಕಿಂತ ಹೆಚ್ಚನ್ನು ನಿರೀಕ್ಷಿಸುವೆವೊ ಅವನೆಲ್ಲಿರಲಿ ದುಃಖ ತಪ್ಪಿದ್ದಲ್ಲ.

ಈಶಾವಾಸ್ಯ ಉಪನಿಷತ್ತಿನಲ್ಲಿ "ತ್ಯಾಗದಿಂದ ಅನುಭವಿಸು" ಎಂಬುದು ಯಜ್ಞದೃಷ್ಟಿಗೆ ಸೇರಿದ ಬೋಧನೆ. ತ್ಯಾಗ ಮಾಡಿದ ಮೇಲೆ ಇನ್ನು ಅನುಭವಿಸುವುದಕ್ಕೆ ಏನು ಉಳಿಯುವುದು ಎಂಬ ಅನುಮಾನ ನಮ್ಮಲ್ಲಿ ಏಳುವುದು. ಸಂಗ್ರಹಿಸುವುದು. ಭೋಗಿಸುವುದು, ಎರಡೂ ಒಂದಾದಮೇಲೊಂದು ಬರುವುದನ್ನು ನಾವು ನೋಡುತ್ತೇವೆ. ಮೊದಲು ವ್ಯಕ್ತಿ ಅಥವಾ ವಸ್ತುವನ್ನು ಸಂಗ್ರಹಿಸಿಕೊಂಡು ನಂತರ ಅದನ್ನು ಅನುಭವಿಸುತ್ತೇವೆ. ಸಂಗ್ರಹಿಸಿರುವುದನ್ನು ತ್ಯಾಗಮಾಡಿಬಿಟ್ಟರೆ ಇನ್ನು ಭೋಗಿಸುವುದಕ್ಕೆ ಉಳಿಯುವುದೇ ಇಲ್ಲ. ಎಲ್ಲಿ ಭೋಗವಿಲ್ಲವೊ ಅಲ್ಲಿ ಆನಂದವಾದರೂ ಹೇಗೆ ಇರಬಲ್ಲದು ಎಂಬುದು ಮಾನವ ಸಾಧಾರಣವನ್ನು ಸಂಶಯಕ್ಕೆ ಈಡುಮಾಡುವುದು. ನಮಗೆಲ್ಲ ಭೋಗಿಸುವ ಆನಂದ ಗೊತ್ತಿದೆ. ತ್ಯಜಿಸುವ ಆನಂದ ಅಷ್ಟು ಪರಿಚಯವಿಲ್ಲ. ಭೋಗದ ಆನಂದಕ್ಕಿಂತ ತ್ಯಾಗದ ಆನಂದ ಮಹತ್ತರವಾದುದು. ಭೋಗದ ಆನಂದದಲ್ಲಿ ಸ್ವಾರ್ಥವಿದೆ. ಅಸೂಯೆ ಹಿಂದೆಯೇ ಕುಳಿತಿದೆ. ಅದರಲ್ಲಿ ಆಸಕ್ತಿ ಇದೆ. ಕಳವಳವಿದೆ. ಅಂಜಿಕೆ ಇದೆ. ವಸ್ತುವನ್ನು ಅನುಭವಿಸುವಾಗ ಮಾತ್ರ ಆನಂದ ಅದರ ರಕ್ಷಣೆ ಅದನ್ನು ಬೇರೆಯಾರಾದರೂ ಪ್ರೀತಿಸಿಯಾರು ಎಂಬ ಅಸೂಯೆ. ಯಾವ ಸಮಯದಲ್ಲಿ ಅದು

ನನ್ನ ಕೈಗಳಿಂದ ನುಸುಳಿಕೊಂಡು ಹೋಗಿ ಬಿಡುವುದೊ ಎಂಬ ಕಳವಳ—ಇವೇ ಮನಸ್ಸಿನಲ್ಲಿ ತುಂಬಿತುಳುಕಾಡುತ್ತಿರುವುದು. ತ್ಯಾಗದ ಆನಂದದಲ್ಲಿ ಈ ಅಂಜಿಕೆ, ಕಳವಳ, ಆಸಕ್ತಿ, ಸ್ವಾರ್ಥ ಭಾವಗಳಿಲ್ಲ. ಪ್ರಪಂಚದಲ್ಲಿ ಯಾವುದೂ ಇವನ ಸ್ವಾಸ್ಥ್ಯಕ್ಕೆ ಭಂಗ ತಾರದು.

ಇದನ್ನು ನಾವು ಚೆನ್ನಾಗಿ ಅರ್ಥಮಾಡಿಕೊಳ್ಳಲು ನಿತ್ಯ ಜೀವನದಿಂದ ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ರುಚಿಕರವಾದ ತಿಂಡಿ ಒಬ್ಬನ ಹತ್ತಿರ ಇದೆ. ಅದನ್ನು ಸ್ವಾರ್ಥ ದೃಷ್ಟಿಯಿಂದ ಬೇಗ ತಿಂದುಬಿಡಬೇಕೆಂದು ಅವನು ಆಶಿಸುವನು. ತಡಮಾಡಿದರೆ ಎಲ್ಲಿ ಮತ್ತೊಬ್ಬರು ಬರುವರೊ, ಇತರರೊಡನೆ ಹಂಚಿಕೊಳ್ಳಬೇಕಾಗುವುದೊ ಎಂಬ ಕಳವಳ. ಅದನ್ನೇ ನಿಸ್ವಾರ್ಥ ದೃಷ್ಟಿಯಿಂದ ಸ್ನೇಹಿತರಿಗೂ ಕೊಟ್ಟು ತಾನೂ ತಿನ್ನುವುದರಲ್ಲಿ ಒಂದು ಆನಂದವಿದೆ. ಅಥವಾ ತಾನು ತಿನ್ನದೆ ಇತರರಿಗೆ ಕೊಡುವುದರಲ್ಲಿ ಒಂದು ಆನಂದವಿದೆ. ಇಲ್ಲಿ ತ್ಯಾಗ ಎಂದರೆ ತಾನು ಏನನ್ನೂ ಅನುಭವಿಸದೆ ಇತರರಿಗೆ ಕೊಟ್ಟುಬಿಡಬೇಕೆಂಬ ದೃಷ್ಟಿಯಿಂದ ತೆಗೆದುಕೊಳ್ಳಬೇಕಾಗಿಲ್ಲ. ಇತರರಿಗೆ ಕೊಟ್ಟಾದ ಮೇಲೆ ತಾನು ಅನುಭವಿಸುವುದು, ಇತರರೊಡನೆ ಸೇರಿ ಅನುಭವಿಸುವುದು, ಈ ಭಾವಗಳು ಆ ಧ್ವನಿಯಲ್ಲಿವೆ.

ಭಕ್ತನಾದವನು ತಾನು ಏನು ಮಾಡುತ್ತಾನೊ, ಏನು ಉಣ್ಣುತ್ತಾನೊ, ಯಾವುದನ್ನು ದಾನಮಾಡುತ್ತಾನೆಯೊ, ಯಾವ ತಪಸ್ಸನ್ನು ಮಾಡುತ್ತಾನೆಯೊ ಅದನ್ನೆಲ್ಲ ಪರಮಾತ್ಮನಿಗೆ ಅರ್ಪಿಸುವನು. ಈ ಅರ್ಪಿತ ಭಾವನೆಯನ್ನೇ ಯಜ್ಞವೆಂದು ಹೇಳುವುದು. ಸೃಷ್ಟಿ ನಿಂತಿರುವುದೇ ಈ ಯಜ್ಞದ ಆಧಾರದ ಮೇಲೆ. ವ್ಯಷ್ಟಿ ಸಮಷ್ಟಿಗೆ ತನ್ನನ್ನು—ತಿಳಿದೊ ತಿಳಿಯದೆಯೊ,

ಪ್ರಯತ್ನಪೂರ್ವಕವಾಗಿಯೋ ಬಲಾತ್ಕಾರವಾಗಿಯೋ ಧಾರೆ ಎರೆದುಕೊಳ್ಳುತ್ತಿದೆ. ಸಮಷ್ಟಿ ವ್ಯಷ್ಟಿಯ ಬೆಳವಣಿಗೆಗೆ ಏನು ಬೇಕೊ ಅದನ್ನು ನೀಡುತ್ತದೆ. ಕೇಳಿಸಿಕೊಂಡು ಸಮಷ್ಟಿ ವ್ಯಷ್ಟಿಗೆ ಕೊಡುವುದಿಲ್ಲ. ಕೇಳಿಸಿಕೊಳ್ಳದೇ ಕೊಡುವುದು. ನಾನು ಕೊಡಬೇಕಾಗಿರುವುದನ್ನು ಕೊಟ್ಟಿದ್ದರೆ, ನನಗೆ ಯಾವ ಕಾಲದಲ್ಲಿ ಏನು ಅಗತ್ಯವಿದೆಯೋ ಅದು ನನ್ನನ್ನು ಹುಡುಕಿಕೊಂಡು ಬರುವುದು. ಇದು ಜೀವನದ ಗಾಢನಿಯಮ.

ಎಲ್ಲರೂ ಕೊಡುತ್ತಿರುವರು. ಕೊಡಲೇ ಬೇಕಾಗಿದೆ: ಕೊಡುವುದರ ಮೇಲೆಯೇ ಬೆಳವಣಿಗೆ ನಿಂತಿರುವುದು. ಜ್ಞಾನಿಯೂ ಕೊಡುತ್ತಿರುವನು, ಅಜ್ಞಾನಿಯೂ ಕೊಡುತ್ತಿರುವನು. ನಿಸ್ವಾರ್ಥಿಯೂ ಕೊಡುತ್ತಿರುವನು. ಸ್ವಾರ್ಥಿಯೂ ಕೊಡುತ್ತಿರುವನು. ಅವರ ಕೊಡುವುದರಲ್ಲಿ ಈ ವ್ಯತ್ಯಾಸವಿದೆ. ಜ್ಞಾನಿ ತಿಳಿದು ಕೊಡುತ್ತಾನೆ: ಸಂತೋಷದಿಂದ ಕೊಡುತ್ತಾನೆ. ಕೊಡುವುದೇ ಅವನ ಪಾಲಿಗೆ ವ್ರತವಾಗಿದೆ. ಧರ್ಮವಾಗಿದೆ. ಅದೇ ಆನಂದವಾಗಿದೆ. ಅಜ್ಞ, ಸ್ವಾರ್ಥಿ. ಸ್ವೀಕರಿಸುವುದಕ್ಕೆ ಕೈತೆರೆದಿರುವನೇ ಹೊರತು ಕೊಡುವ ಪ್ರಸಂಗ ಬಂದರೆ ಚೌಕಾಶಿ ಮಾಡುತ್ತಾನೆ. ಕೊಡಲೇ ಬೇಕಾಗಿ ಬಂದಾಗ ಗೊಣಗಾಡುತ್ತ ಕೊಡುವನು. ಹಾಗೆ ಗೊಣಗಾಡುತ್ತ ಕೊಡುವುದಕ್ಕೂ ಮನಸ್ಸು ಮಾಡದೇ ಇದ್ದರೆ ಪ್ರಕೃತಿ. ಭಗವಂತನ ದೇವದೂತ, ಹಲವು ವೇಷಗಳಲ್ಲಿ ಬಂದು ಅವನಿಂದ ವಸೂಲಿಮಾಡುವನು. ಅವನು ರೋಗದ ವೇಷದಲ್ಲಿ ಬರುವನು. ಕಳ್ಳಕಾಕರ ವೇಷದಲ್ಲಿ ಬರುವನು. ನಷ್ಟದ ವೇಷದಲ್ಲಿ ಬರುವನು. ಕೆಲವು ವೇಳೆ ಅತಿ ಆಸೆಯ ಗಾಳವನ್ನೊಡ್ಡಿ ಅವನಿಂದ ಬರಬೇಕಾದುದನ್ನು ವಸೂಲಿಮಾಡಿ ಕೊಂಡು ಹೋಗುವನು. ಅವನಿಂದ ಬರಬೇಕಾದುದರಲ್ಲಿ

ಕುರುಡುಕಾಸನ್ನೂ ಅವನು ಬಿಡುವುದಿಲ್ಲ. ನಕ್ಷತ್ರಕನಿಗಿಂತ ನಿರ್ದಯ ಈ ದೇವರ ಘಂಟ. ಯಾವುದನ್ನು ಕೊಡಬೇಕಾಗಿ ದೆಯೋ ಅದನ್ನು ಮುಕ್ತಹಸ್ತದಿಂದ, ಸಂತೋಷದಿಂದ ಕೊಟ್ಟರೆ, ಕೊಟ್ಟವನಿಗೆ ಒಂದು ಶ್ರೇಯಸ್ಸು. ಯಾವಾಗ ಕೊಡುವು ದಿಲ್ಲವೊ ಪ್ರಕೃತಿಯಂತೂ ಇವನನ್ನು ಬಿಡುವುದಿಲ್ಲ. ಯಾವುದೋ ನೆವದಿಂದ ವಸೂಲಿಮಾಡುವುದು. ಅದಕ್ಕೆ ನಷ್ಟವೇನೂ ಇಲ್ಲ, ನಮಗೇ ನಷ್ಟ. ಮುಕ್ತಹಸ್ತದಿಂದ ನಗುತ್ತ ಕೊಟ್ಟಿದ್ದರೆ ಯಾವ ಆನಂದ ನಮಗೆ ಬರುತ್ತಿತ್ತೊ ಅದು ನಮಗೆ ಲಭ್ಯವಿಲ್ಲ. ಅದರ ಬದಲು ಮನಸ್ತಾಪ, ಅಶಾಂತಿ, ಗೋಣಗಾಟ.

ಯಜ್ಞದ ಭಾವನೆಯನ್ನು ಭಕ್ತಿಯ ಭಾಷೆಗೆ ಅಳವಡಿಸಿ ಕೊಳ್ಳಬಹುದು. ಈ ವಿರಾಟ್ ಬ್ರಹ್ಮಾಂಡವೆಲ್ಲ ಆಗಿರುವುದು ಭಗವಂತನ ಒಂದು ಅಂಶದಿಂದ ಎಂಬುದನ್ನು ಗೀತೆಯಲ್ಲಿ ಓದುವೆವು. ಇಲ್ಲಿಯೂ ಆ ಯಜ್ಞದ ಭಾವನೆ ಹಾಸುಹೊಕ್ಕಾ ಗಿದೆ. ಈ ಪ್ರಪಂಚದಲ್ಲಿ ಯಾವುದೊಂದೂ ತನಗಾಗಿ ಇಲ್ಲ! ಮತ್ತೊಂದಕ್ಕಾಗಿ ಇದೆ. ಇತರರಿಗಾಗಿ ತಾನು ಎಂಬ ಪಲ್ಲವಿ ಯನ್ನೇ ಅಣು ಮತ್ತು ಮಹತ್ತು ಸಾರುತ್ತಿದೆ. ಎಲ್ಲಿಯವರೆಗೆ ಇತರರಿಗೆ ತಾನೂ ಬೇಕೊ ಅಲ್ಲಿಯವರೆಗೆ ಮಾತ್ರ ತನ್ನ ಅಸ್ತಿತ್ವ. ದೂರದರ್ಶಕ ಯಂತ್ರದ ಮೂಲಕ ತಾರೆ ನೀಹಾರಿಕೆಗಳನ್ನು ನೋಡಲಿ, ಸೂಕ್ಷ್ಮದರ್ಶಕಯಂತ್ರದ ಮೂಲಕ ಅಣು ಪ್ರಪಂಚ ವನ್ನು ನೋಡಲಿ, ಸಾಧಾರಣವಾಗಿ ನಮ್ಮ ಕಣ್ಣಮುಂದೆ ಕಾಣುವ ಯಾವ ವಸ್ತುವೂ ತನಗಾಗಿ ಇಲ್ಲ. ಬೇರೊಂದು ಭೂಮಕ್ಕೆ ಇದೆ. ಚಂದ್ರ ತನಗಾಗಿ ಇಲ್ಲ. ಅದರ ಚಲನೆಯಿಂದ ಈ ಭೂಮಿಯ ಸಮುದ್ರದಮೇಲೆ ಆಗುವ ಉಬ್ಬರ ಇಳಿತಗಳು, ಕಾಲಗಣನೆ, ಕಾಂತಿ ಇವನ್ನೆಲ್ಲ ಭೂಮಿಗೆ ನೀಡಿರುವುದು. ರವಿ

ತನಗಾಗಿ ಇಲ್ಲ. ಅವನು ಕಾಂತಿ ನೀಡುತ್ತಿರುವುದೇ ನಮ್ಮ ಭೂಮಿಯ ಜೀವನ ಸ್ಪಂದನಕ್ಕೆ ಕಾರಣ. ಅದಿಲ್ಲದೇ ಇದ್ದರೆ ನಮ್ಮ ಬಾಳು, ಮಳೆಯಿಲ್ಲದೆ ಬೆಳೆಯಿಲ್ಲದೆ. ಸಸ್ಯವರ್ಗಗಳಿಲ್ಲದೆ, ಪ್ರಾಣಿವರ್ಗಗಳಾವುವೂ ಇಲ್ಲದೆ ಸ್ಮಶಾನಸದೃಶ ಮೌನವಾಗಿರುತ್ತಿತ್ತು. ಭೂಮಿಯೂ ತನಗಾಗಿ ಇಲ್ಲ. ತನಗೆ ಸ್ವಲ್ಪವೂ ವಿರಾಮವಿಲ್ಲದೆ, ತನ್ನ ಸೃಷ್ಟಿಯ ಆದಿಯಿಂದ ಸೂರ್ಯನ ಸುತ್ತಲೂ ಪ್ರದಕ್ಷಿಣೆ ಮಾಡುತ್ತಿರುವುದೇ ನಮಗಾಗಿ. ಅದು ಸುತ್ತುತ್ತಿದ್ದರೆ ನಮಗೆ ಹಗಲು ರಾತ್ರಿ, ಪಕ್ಷ ಮಾಸ ಋತುಗಳು. ಮುಂದೆ ಮಾನವ ಬರುವ ತನ್ನ ತೊಡೆಯಮೇಲೆ ಆಡುವುದಕ್ಕೆ ಎಂದು, ಕೋಟ್ಯಂತರ ವರುಷಗಳು ಹಿಂದಿನಿಂದಲೇ ಭೂಮಿ ತನ್ನ ಗರ್ಭದಲ್ಲಿ ಅವನಿಗಾಗಿ ಕಲ್ಲಿದ್ದಲನ್ನು ಸಂಗ್ರಹಿಸಿಟ್ಟಿತು, ಪೆಟ್ರೋಲ್ ಸಂಗ್ರಹಿಸಿಟ್ಟಿತು, ಲೋಹಗಳನ್ನು ಸಂಗ್ರಹಿಸಿತು. ಮಾನವ ಇದುವರೆಗೆ ಆವಿ, ಕಲ್ಲಿದ್ದಲು, ಪೆಟ್ರೋಲ್, ವಿದ್ಯುತ್ ಶಕ್ತಿಗಳು ಇವುಗಳ ಉಪಯೋಗವನ್ನು ಕಲಿತುಕೊಂಡು. ಈಗತಾನೆ ಅಣು ಶಕ್ತಿಯ ಕಡೆ ಹೋಗುತ್ತಿರುವನು. ಇವುಗಳೆಲ್ಲ ಪ್ರಪಂಚದ ಹೊರವಲಯದಲ್ಲಿ ಬಿದ್ದಿರುವ ಚೂರುಪಾರುಗಳಂತಹವು. ಇವುಗಳನ್ನೇ ಕಂಡು ಮಾನವ ಇಷ್ಟೊಂದು ಮುಗ್ಧನಾಗಿರುವನು. ಮತ್ತೆ ಇನ್ನು ಯಾವ ಬಗೆಯ ಶಕ್ತಿಗಳನ್ನು ಭೂಮಿ ತನ್ನ ಭಂಡಾರದಲ್ಲಿ ಅಡಗಿಸಿ ಇಟ್ಟುಕೊಂಡಿದೆಯೊ ಯಾರಿಗೆ ಗೊತ್ತು! ಅದನ್ನು ಕೇಳುವ ರೀತಿ ನಮಗೆ ಗೊತ್ತಾದರೆ, ಅದನ್ನು ಮಾನವ ಕೋಟಿಯ ಕಲ್ಯಾಣಕ್ಕೆಂದು ಬೇಡಿದರೆ, ಇನ್ನು ಯಾವ ಯಾವ ಅದ್ಭುತ ಶಕ್ತಿಗಳನ್ನು ಭೂದೇವಿ ನಮ್ಮ ಮುಂದೆ ಎಸೆಯುವಳೋ!

ಭೂಮಿಯ ಮೇಲೆ ಇರುವ ಯಾವುದೂ ತನಗಾಗಿ ಇಲ್ಲ ಬೆಟ್ಟ ತನಗಾಗಿ ಇಲ್ಲ: ಮೋಡಗಳನ್ನು ತಡೆದು ಮಳೆಯನ್ನು

ಕೊಡುವುದಕ್ಕೆ ಇದೆ. ನದಿ ತನಗಾಗಿ ಹರಿಯುತ್ತಿಲ್ಲ. ಭೂಮಿಯಲ್ಲಿ ಬೆಳೆ ಬೆಳೆಯಲಿ, ಜೀವಿಗಳು ನೀರು ಕುಡಿಯಲಿ. ತನ್ನನ್ನು ಉಪಯೋಗಿಸಿಕೊಂಡು ಸುಖವಾಗಿರಲಿ ಎಂದು ಹಗಲು ರಾತ್ರಿ ಹರಿಯುತ್ತಿರುವಳು. ಮರ, ಹೂವು ಹಣ್ಣುಗಳನ್ನು ತನಗಾಗಿ ಕೊಡುತ್ತಿಲ್ಲ. ಮೌನವಾಗಿ, ಯಾವ ಜಾಹಿರಾತೂ ಇಲ್ಲದೆ ಮನುಷ್ಯ ಮೃಗಪಕ್ಷಿಗಳಿಗೆ ಕೊಡುತ್ತಿದೆ. ಹೂವಿಂದ ಹೂವಿಗೆ ಹಾರುವ ಚಿಟ್ಟೆಯಾಗಲಿ, ನೆಲದೊಳಗೆ ಹಗಲು ರಾತ್ರಿ ಬಿಡುವಿಲ್ಲದೆ ಕೆಲಸಮಾಡುವ ಮಣ್ಣಿನ ಹುಳುವಾಗಲಿ, ತುಂಬಾ ಸೂಕ್ಷ್ಮವಾಗಿರುವ ಕ್ರಿಮಿಕೀಟಗಳಾಗಲಿ, ನಮಗೆ ಇನ್ನೂ ಗೊತ್ತಿಲ್ಲದ ಹಲವು ರೀತಿಯಲ್ಲಿ ಜೀವನದ ಬೆಳವಣಿಗೆಗೆ ದುಡಿಯುತ್ತಿವೆ. ಈ ಬ್ರಹ್ಮಾಂಡದಲ್ಲಿರುವ ಅನ್ಯೋನ್ಯಾಶ್ರಯ ಎಂಬ ನಿಯಮದ ಹಿಂದೆ ಹೋಗಿ ನೋಡಿದರೆ, ಸಮಷ್ಟಿಗಾಗಿ ಎಲ್ಲವೂ ಸಜ್ಜಿತವಾಗಿರುವಂತೆ ಇದೆ. ಇದೇ ಸೃಷ್ಟಿಯ ಬಂಡಿಗೆ ಇರುವ ನೊಗ. ಎಲ್ಲರನ್ನೂ ಇದಕ್ಕೆ ಕಟ್ಟಿ ಎಳೆಸುವುದು. ಯಾರು ತಮ್ಮ ಕತ್ತನ್ನು ಅದಕ್ಕೆ ಒಡ್ಡುವರೊ ಅವರು ಆಗ ವಿಶ್ವದ ಲೀಲೆಯಲ್ಲಿ ಭಾಗಿಗಳಾಗುತ್ತಾರೆ. ಭಗವಂತನೊಂದಿಗೆ ಸೌಹಾರ್ದದಿಂದ ಬಾಳುವರು. ಎಂದು ನಾವು ಈ ನೊಗಕ್ಕೆ ಕತ್ತನ್ನು ಒಡ್ಡಲು ನಿರಾಕರಿಸುವೆವೊ, ಆಗ ಗಾಡಿಹೊಡೆಯುವನೇನು ನಮ್ಮನ್ನು ಖುಲಾಸೆಮಾಡುವುದಿಲ್ಲ. ಬಲಾತ್ಕಾರವಾಗಿ ಕಟ್ಟುವನು, ಹೊಡೆಯುವನು, ಎಳೆಸುವನು. ಅವನ ಕೆಲಸ ನಮ್ಮ ಭಂಡತನದಿಂದ ನಿಂತುಹೋಗುವುದಿಲ್ಲ. ಅದಾಗೇ ಆಗುವುದು. ಆದರೆ ನಮ್ಮ ಪುರೋಗಮನ ಮಾತ್ರ ನಿಲ್ಲುವುದು.

ಬ್ರಹ್ಮಾಂಡದಲ್ಲಿ ಯಾವ ನಿಯಮ ಸತ್ಯವಾಗಿರುವುದೋ ಅದೇ ಪಿಂಡಾಂಡದಲ್ಲಿಯೂ ಸತ್ಯವಾಗಿರುವುದು. ಈ ದೇಹವೇ ನಮ್ಮ

ಪಿಂಡಾಂಡ. ಅದು ಹೇಗೆ ರಚಿತವಾಗಿದೆ, ಅದರಲ್ಲಿರುವ ಬೇರೆ ಬೇರೆ ಅಂಗಗಳು ಒಟ್ಟುದೇಹದ ಹಿತದೃಷ್ಟಿಯನ್ನು ಇಟ್ಟು ಕೊಂಡು ಕೆಲಸಮಾಡುತ್ತಿವೆ ಎಂಬುದನ್ನು ನೋಡಿದಾಗ ವ್ಯಕ್ತ ವಾಗುವುದು. ಹೃದಯದ ಕೇಂದ್ರಕ್ಕೆ ನಾನಾಭಾಗಗಳಿಂದ ರಕ್ತ ಬರುವುದು. ಹೃದಯವಾದರೋ ತನ್ನ ಬೆಳವಣಿಗೆಗೆ ಅತ್ಯಲ್ಪ ವನ್ನು ಮಾತ್ರ ಉಪಯೋಗಿಸಿಕೊಂಡು. ಅದನ್ನು ದೇಹದ ಮೂಲೆ ಮೂಲೆಗೂ ಹೋಗುವಂತೆ ಒತ್ತಿ ಕಳುಹಿಸುವುದು. ಇತರ ಕಡೆಗೆ ತಾನು ರಕ್ತವನ್ನು ಹರಿಸುವುದಕ್ಕಾಗಿ ಇದೆಯೇ ಹೊರತು ತನಗಾಗಿ ಅದು ಇಲ್ಲ. ಮೂಳೆಯ ಒಳಗೆ ರಕ್ತ ಕಣಗಳು ಸೃಷ್ಟಿಯಾಗುತ್ತವೆ. ಅವು ಅನಂತರ ಅಲ್ಲಿಂದ ಬಂದು ರಕ್ತ ಪ್ರವಾಹಕ್ಕೆ ಸೇರುತ್ತವೆ. ಯಾರದೋ ಮನೆಯಲ್ಲಿ ಹುಟ್ಟಿ ಯಾರಿಗೊ ದುಡಿದಂತೆ ಕಂಡರೂ ಇವರ ಹಿಂದೆ ಇರುವುದು ಒಟ್ಟು ದೇಹದ ರಕ್ಷಣೆ. ನಮ್ಮ ದೇಹದಲ್ಲಿ ಹಲವು ಕಡೆ ಇರುವ ಥೈರಾಯಿಡ್, ಪಿಟುಯೇಟರಿ, ಟೆಸ್ಟಿಸ್ ಮುಂತಾದ ಗ್ರಂಥಿಗಳು ದೇಹಪೋಷಣೆಗೆ ಬೇಕಾದ ಹಲವು ದ್ರವಗಳನ್ನು ಸುರಿಸುವುದ ಕ್ಕಾಗಿ ದುಡಿಯುತ್ತಿವೆ. ಅವುಗಳ ಪೋಷಣೆಗೆ ಬೇಕಾದಸಾಮಗ್ರಿ ಗಳನ್ನು ದೇಹ ಅವಕ್ಕೆ ಒದಗಿಸುವುದು. ನಾವು ವಾಸಮಾಡಿ ಕೊಂಡಿರುವ ದೇಹದಲ್ಲಿ, ಎಲ್ಲವೂ ದೇಹಕ್ಕಾಗಿ. ದೇಹ ಎಲ್ಲದ ಕ್ಕಾಗಿ ಎಂಬ ನಿಯಮ ಚೂರೂ ತಪ್ಪದೆ ಕೆಲಸಮಾಡುತ್ತಿದೆ.

ಸಮಾಜದಲ್ಲಿಯೂ ನಾವು ಇದೇ ನಿಯಮವನ್ನು ನೋಡು ತ್ತೇವೆ. ಸಮಾಜ ಮೊದಲು ಯಾವುದಾದರೂ ವ್ಯಕ್ತಿಯನ್ನು ಆರಿಸಿಕೊಂಡು ಅಲ್ಲಿ ವಿದ್ವತ್ ಐಶ್ವರ್ಯ ಅಧಿಕಾರ ಮುಂತಾದು ವನ್ನು ಸಂಗ್ರಹಿಸುವುದು. ಏಕೆಂದರೆ ಅದು ಸಮಾಜದ ಮೂಲೆ ಮೂಲೆಗೆ ಹೋಗಬೇಕಾದರೆ ಅದನ್ನು ಸಂಗ್ರಹಿಸುವ ಕೇಂದ್ರ

ಇರಬೇಕು. ಯಾವ ವ್ಯಕ್ತಿಯಲ್ಲಿ ಏನು ಕೇಂದ್ರೀಕೃತವಾಗಿರುವುದೊ, ಪುನಃ ಅವನು ಅದನ್ನು ಎಲ್ಲಾ ಕಡೆಗೂ ಹಲವು ರೀತಿಯಲ್ಲಿ ಕಳುಹಿಸುವುದಕ್ಕಾಗಿ ಸಂಗ್ರಹಿಸಿರುವನು ಎಂಬ ರಹಸ್ಯವನ್ನು ಅರಿತಿರಬೇಕು. ಏನು ಸಂಗ್ರಹವಾದ ಮೇಲೆ ಹೊರಗೆ ಹೋಗದಂತೆ ಬಾಗಿಲು ಹಾಕುವನೊ ಆಗ ಅವನನ್ನು ಕಸದಬುಟ್ಟಿಗೆ ಎಸೆದು ದೇವರು ಬೇರೊಂದು ವ್ಯಕ್ತಿಯನ್ನು ಆರಿಸಿಕೊಳ್ಳುವನು. ಯಾವಾಗ ನಾವು ನಮ್ಮಲ್ಲಿ ಏನು ಒಳ್ಳೆಯದು ಇರುವುದೊ ಅದನ್ನು ಅರ್ಪಿತ ಭಾವದಿಂದ ಇತರರಿಗೆ ನೀಡುವೆವೊ ಅದೇ ಯಜ್ಞ. ಈ ದೃಷ್ಟಿಯೇ ಕಲ್ಯಾಣಕಾರಿ. ಸೃಷ್ಟಿ ರಚಿತವಾಗಿರುವುದೇ ಈ ಆಧಾರದ ಮೇಲೆ.

ಸೃಷ್ಟಿಯಲ್ಲಿ ನಾವೆಲ್ಲ ಒಬ್ಬೊಬ್ಬರು ಒಂದೊಂದು ಕೆಲಸದಲ್ಲಿ ನಿರತರಾಗಿರುವೆವು. ಒಂದು ಕೆಲಸ ಮೇಲಲ್ಲ ಮತ್ತೊಂದು ಕೆಲಸ ಕೀಳಲ್ಲ. ಸಮಷ್ಟಿಯ ಹಿತದೃಷ್ಟಿಯಿಂದ ನೋಡಿದರೆ ಯಾವ ಒಂದು ಸಣ್ಣದೂ ಮಹತ್ತಿನಷ್ಟೇ ಮುಖ್ಯ. ಒಬ್ಬ ರೈತನಾಗಿರಬಹುದು, ಕಾರ್ಮಿಕನಾಗಿರಬಹುದು, ಗುಮಾಸ್ತನಾಗಿರಬಹುದು, ಉಪಾಧ್ಯಾಯನಾಗಿರಬಹುದು, ಮಂತ್ರಿಯಾಗಿರಬಹುದು, ಊಳಿಗದವನಾಗಿರಬಹುದು, ಗೃಹಸ್ಥನಾಗಿರಬಹುದು, ಸನ್ಯಾಸಿಯಾಗಿರಬಹುದು. ಅರ್ಪಿತ ಭಾವದಿಂದ ನಮ್ಮ ಪಾಲಿನ ಕರ್ತವ್ಯವನ್ನು ಭಗವಂತನಿಗೆ ಅರ್ಪಿಸಿದರೆ, ಎಲ್ಲರೂ ಅದರ ಮೂಲಕವಾಗಿಯೇ ಪರಮಾತ್ಮನ ಸಮೀಪಕ್ಕೆ ಹೋಗಬಹುದು ಎಂಬುದನ್ನು ಶ್ರೀಕೃಷ್ಣನು ಹಲವು ರೀತಿ ಗೀತೆಯಲ್ಲಿ ಅರ್ಜುನನನ್ನು ನಿಮಿತ್ತವಾಗಿಟ್ಟುಕೊಂಡು ಮಾನವಕೋಟಿಯ ಕಲ್ಯಾಣಕ್ಕಾಗಿ ಬೋಧಿಸುವನು.

ಈ ಯಜ್ಞದೃಷ್ಟಿ ಭರತಖಂಡದಲ್ಲಿ ನಮಗೆ ಇಂದು ಎಂದಿ

ಗಿಂತ ಜಾಸ್ತಿ ಬೇಕು. ಕ್ರಮಾನುಕ್ರಮವಾಗಿ ಹಲವು ಪಂಚವಾರ್ಷಿಕ ಯೋಜನೆಗಳು ಬರುತ್ತಿವೆ. ದೇಶವನ್ನು ಬಡತನದಿಂದ ಮೇಲೆತ್ತುವುದಕ್ಕೆ, ಮೌಢ್ಯತೆಯ ನಿವಾರಣೆಗೆ, ಆರೋಗ್ಯವನ್ನು ಹೆಚ್ಚಿಸುವುದಕ್ಕೆ ಹೊಸದೊಂದು ಗೆಲುವಿನ ದೃಷ್ಟಿಯನ್ನು ಜನರಲ್ಲಿ ಮೂಡುವಂತೆ ಮಾಡುವುದಕ್ಕೆ ಮುಂದಾಳುಗಳು ದುಡಿಯುತ್ತಿರುವರು. ಈ ಯಜ್ಞಭಾವನೆ, ಒಬ್ಬನು ಯಾವ ರಾಜಕೀಯ ಪಂಗಡಕ್ಕೆ ಸೇರಿದ್ದರೂ ಚಿಂತೆಯಿಲ್ಲ. ಅವನಿಗೆ ಸಹಾಯಕವಾಗಿ ನಿಂತು, ಅವನಿಂದ ದೇಶಕ್ಕೆ ಆಗುವ ಕೆಲಸವನ್ನು ಉತ್ತಮಗೊಳಿಸಬಲ್ಲದು.

## ೫. ಚಾತುರ್ವರ್ಣ್ಯ

"ಗುಣ ಮತ್ತು ಕರ್ಮಗಳ ವಿಭಾಗದ ಮೂಲಕ ಚಾತುರ್ವರ್ಣ್ಯ ನನ್ನಿಂದ ಸೃಷ್ಟಿಸಲ್ಪಟ್ಟಿತು".

—ಅಧ್ಯಾಯ ೪, ಶ್ಲೋಕ ೧೩

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮತ್ತು ಶೂದ್ರ ಎಂಬ ವರ್ಣಗಳನ್ನು ದೇವರೇ ಮಾಡಿದನು. ಗುಣ ಮತ್ತು ಕರ್ಮಗಳಿಗೆ ಅನುಸಾರವಾಗಿ ಅವರನ್ನು ವಿಭಾಗಮಾಡಿರುವೆನು ಎಂದು ಹೇಳುತ್ತಾನೆ. ಶ್ರೀಕೃಷ್ಣ ನಾಲ್ಕು ವರ್ಣವನ್ನು ಕುರಿತು ಹೇಳುವಾಗ ಕೇವಲ ಭರತಖಂಡವೊಂದನ್ನೇ ಇಟ್ಟುಕೊಂಡಿಲ್ಲ. ಇಡೀ ವಿಶ್ವವನ್ನು ತನ್ನ ಮನಸ್ಸಿನಲ್ಲಿಟ್ಟುಕೊಂಡಿರುವನು. ಒಂದು ದೇಶ ಚೆನ್ನಾಗಿರಬೇಕಾದರೆ ಅಲ್ಲಿ ನಾಲ್ಕು ಬಗೆಯ ಜನರು ಇರಬೇಕು. ಅವರಲ್ಲಿ ಪ್ರತಿಯೊಬ್ಬರೂ ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಮಾಡಬೇಕು. ಯಾವಾಗ ಅವರು ತಮ್ಮ ಪಾಲಿನ ಕರ್ತವ್ಯವನ್ನು ಮಾಡುವುದಿಲ್ಲವೋ, ಇನ್ನೊಬ್ಬರ

ಕರ್ತವ್ಯವನ್ನು ಮಾಡುತ್ತಾರೆಯೋ ಆಗಲೇ ವರ್ಣಸಂಕರ. ಸಮಾಜದಲ್ಲಿ ಅನಾಯಕತೆ ಉಂಟಾಗುವುದು. ಇದೊಂದು ಜಟಿಲ ಪ್ರಶ್ನೆ. ಭರತಖಂಡದಲ್ಲಿ ಅನೇಕರು ವರ್ಣವನ್ನು ಜಾತಿ ಎಂದು ಭಾವಿಸುವುದು ಸಾಧಾರಣವಾಗಿಹೋಗಿದೆ. ಆದರೆ ಮೇಲಿನ ಶ್ಲೋಕವನ್ನು ತೆಗೆದುಕೊಂಡರೆ ಜಾತಿಯ ಪ್ರಶ್ನೆಯೇ ಬರುವುದಿಲ್ಲ. ಸತ್ವ ರಜಸ್ಸು ತಮಸ್ಸು ಮತ್ತು ಅವರು ಯಾವ ವೃತ್ತಿಯನ್ನು ಅನುಸರಿಸಿರುವರೊ ಅದಕ್ಕೆ ತಕ್ಕಂತೆ ವರ್ಣವನ್ನು ವಿಭಾಗಿಸಿರುವೆನು ಎನ್ನುತ್ತಾನೆ.

ಭರತಖಂಡದಲ್ಲಿ ಒಂದು ದೃಷ್ಟಿಯಿಂದ ನೋಡಿದರೆ ಈಗ ಯಾವ ಜಾತಿಯನ್ನು ತೆಗೆದುಕೊಂಡರೂ, ಅದರಲ್ಲಿ ನಾಲ್ಕು ವರ್ಣದ ಜನರು ಇರುವರು. ಬ್ರಾಹ್ಮಣರ ಒಂದು ಕುಟುಂಬದಲ್ಲಿ ವೇದಾಧ್ಯಯನ ಜಪ ತಪಸ್ಸುಗಳಿಗೆ ಮೀಸಲಾಗಿಟ್ಟ ಹುಡುಗ ನೊಬ್ಬ ಇರುವನು. ಮತ್ತೊಬ್ಬ ಮಿಲಿಟರಿಗೆ ಸೇರಿ ಕ್ಯಾಪ್ಟನ್ ಆಗುವನು. ಇನ್ನೊಬ್ಬನು ವ್ಯಾಪರಕ್ಕೆ ಕೈಹಾಕುವನು. ನಾಲ್ಕನೆಯವನು ಯಾವುದೋ ಫ್ಯಾಕ್ಟರಿಗೆ ಸೇರಿ ಕೂಲಿಕಾರ ನಾಗುವನು. ಒಂದೇ ಜಾತಿಯಲ್ಲಿ ಹುಟ್ಟಿದ ನಾಲ್ಕು ಜನ ಮಕ್ಕಳು ಒಂದೊಂದು ವರ್ಣದ ವೃತ್ತಿಯನ್ನು ಅನುಸರಿಸು ತ್ತಿರುವರು. ಇಲ್ಲಿ ಜಾತಿಯಲ್ಲ ಮುಖ್ಯ. ನಾವು ಯಾವ ವರ್ಣ ವನ್ನು ಅನಂತರ ನಮ್ಮ ಯೋಗ್ಯತೆಗೆ ಮತ್ತು ಅಭಿರುಚಿಗೆ ತಕ್ಕಂತೆ ಆರಿಸಿಕೊಳ್ಳುವೆವೊ ಅದು ಮುಖ್ಯ. ಪ್ರತಿಯೊಂದು ವೃತ್ತಿಗೂ ಒಂದು ಧರ್ಮವಿದೆ. ಅದನ್ನು ಅನುಸರಿಸಬೇಕು. ಯಾವ ವೃತ್ತಿಯ ಮೇಲೆ ನಮಗೆ ಅಭಿರುಚಿ ಇರುವುದೋ ಮತ್ತು ಯಾವುದಕ್ಕಾಗಿ ನಾವು ಹಲವು ವರುಷಗಳು ತರಬೇತನ್ನು ತೆಗೆದುಕೊಂಡಿರುವೆವೊ, ಅದನ್ನು ಬಿಡದೆ ಅದರಲ್ಲಿ ಮತ್ತು

ಅದಕ್ಕಾಗಿ ನಮ್ಮ ಪ್ರಾಣವನ್ನು ಅರ್ಪಿಸಬೇಕು. ಹಾಗೆ ಮಾಡದೆ ಹೋದರೆ ನಾವು ತಪ್ಪಿತಸ್ಥರಾಗುವೆವು. ಅರ್ಜುನ ಇಲ್ಲಿ ಮಾಡುತ್ತಿರುವ ತಪ್ಪು ಅದೇ. ಅವನು ಕ್ಷತ್ರಿಯನಾಗಿ ಹುಟ್ಟಿದ್ದು ಮಾತ್ರವಲ್ಲ, ಅದು ಗೌಣ. ಅನಂತರ ಅವನು ಕ್ಷತ್ರಿಯನ ವೃತ್ತಿಯಲ್ಲಿ ತರಬೇತನ್ನು ತೆಗೆದುಕೊಂಡಿರುವನು. ದೇಶ ಯಾವುದೋ ಒಂದು ಕೆಲಸವನ್ನು ಅವನಿಂದ ಒಂದು ಸನ್ನಿವೇಶ ದಲ್ಲಿ ನಿರೀಕ್ಷಿಸುತ್ತದೆ. ಅವನು ಯಾವಾಗ ಆ ಕೆಲಸವನ್ನು ಮಾಡುವುದಿಲ್ಲವೋ ಆಗ ಪಾಪ ಮಾಡಿದವನಾಗುತ್ತಾನೆ.

ಭರತಖಂಡದಲ್ಲಿ ನಾವೀಗ ಯಾವುದನ್ನೂ ಜಾತಿಯ ದೃಷ್ಟಿ ಯಿಂದ ಅಳೆಯಬೇಕಾಗಿಲ್ಲ. ಏಕೆಂದರೆ. ಯಾವ ಜಾತಿಯೂ ಶುದ್ಧವಾಗಿಲ್ಲ. ಎಲ್ಲರೂ ಬೇರೆ ಬೇರೆ ವೃತ್ತಿಗಳಿಗೆ ಕೈಹಾಕಿರು ವರು. ಆದರೆ ಒಂದನ್ನು ನಾವು ಅನುಸರಿಸಬೇಕು. ಯಾವ ವೃತ್ತಿ ಯನ್ನು ನಾವು ತೆಗೆದುಕೊಂಡಿರುವೆವೊ ಅದಕ್ಕೊಂದು ಧರ್ಮವಿದೆ. ಅದನ್ನು ಅನುಸರಿಸಬೇಕು. ಹಾಗೆ ಅನುಸರಿಸುವಾಗ ಒಂದು ವೃತ್ತಿ ಮೇಲಲ್ಲ, ಮತ್ತೊಂದು ವೃತ್ತಿ ಕೀಳಲ್ಲ. ಪ್ರತಿಯೊಂದು ಮತ್ತೊಂದರಷ್ಟೇ ಮುಖ್ಯ, ಒಟ್ಟಿನ ದೃಷ್ಟಿಯಿಂದ ನೋಡಿದಾಗ.

ಯಾವ ದೇಶವನ್ನೇ ತೆಗೆದುಕೊಂಡರೂ ಮಹಾಪುರುಷರು ಮೇಧಾವಿಗಳು ದೇಶ ಎತ್ತಕಡೆ ಹೋಗಬೇಕು, ಏನನ್ನು ಅದು ಸಾಧಿಸಬೇಕಾಗಿದೆ. ಯಾವುದು ಯೋಗ್ಯವಾದುದು ಇವನ್ನೆಲ್ಲ ಜಗದ ಜಂಜಡದಿಂದ ದೂರವಿದ್ದು ಆಲೋಚಿಸುವವರು ಇದ್ದೇ ತೀರಬೇಕು. ಏಕಡನೆಯದೆ. ದೇಶದ ಒಳಗಡೆ ಅನ್ಯಾಯಕತೆ ಬರದಂತೆ, ಹೊರಗಿನಿಂದ ಬರುವ ಶತ್ರುಗಳಿಗೆ ಬಲಿಯಾಗದಂತೆ ನೋಡಿಕೊಳ್ಳುವುದಕ್ಕೆ ಒಂದು ಸುವ್ಯವಸ್ಥಿತವಾಗಿ ನಡೆಸಿರುವ ಆಡಳಿತ: ಅದಕ್ಕೆ ಸಹಾಯಕವಾಗಿ ಕೋರ್ಟು ಕಚೇರಿ: ಪೋಲಿಸು.

ಸೈನ್ಯ ಮುಂತಾದುವು ಇರಲೇಬೇಕು. ಐಶ್ವರ್ಯವನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಂಚುವ ವರ್ತಕರು ಇರಬೇಕು. ಅದನ್ನು ಉತ್ಪತ್ತಿ ಮಾಡುವ ಶ್ರಮಜೀವಿಗಳು ಇರಲೇಬೇಕು. ನಾವು ಎಲ್ಲರನ್ನೂ ಒಂದೇ ಗುಂಪಿಗೆ ತರುವುದಕ್ಕಾಗುವುದಿಲ್ಲ. ವೈವಿಧ್ಯತೆಯೇ ಜೀವನದ ನಿಯಮ. ಪ್ರತಿಯೊಬ್ಬರೂ ತಮ್ಮ ತಮ್ಮ ಕರ್ತವ್ಯವನ್ನು ಮಾಡಿದಾಗ ಮಾತ್ರ ಒಟ್ಟು ರಾಷ್ಟ್ರ ಭದ್ರವಾಗಿರುವುದು. ಈ ಭಾವನೆಗಳೆಲ್ಲ ವರ್ಣದ ಭಾವನೆಯಲ್ಲಿ ಸುಪ್ತವಾಗಿದೆ.

## ೬. ಯೋಗಸಮನ್ವಯ

ಯೋಗ ಎಂದರೆ ಒಂದುಗೂಡಿಸುವುದು. ಈಗ ಅಜ್ಞಾನದಲ್ಲಿ ತೊಳಲುತ್ತಿರುವ ಜೀವಿಯನ್ನು ದೇವರ ಸಮೀಪಕ್ಕೆ ಕರೆದು ಕೊಂಡು ಹೋಗುವ ಮಾರ್ಗವನ್ನು ಯೋಗ ಎನ್ನುವರು. ಹಾಗೆ ದೇವರ ಬಳಿಗೆ ಹೋಗಲು ಯಾವುದೋ ಒಂದು ಮಾರ್ಗವಲ್ಲ ನಮಗೆ ಗೀತೆಯಲ್ಲಿ ದೊರಕುವುದು. ಅಲ್ಲಿ ಹಲವು ಮಾರ್ಗ ಗಳಿವೆ. ಅಲ್ಲಿ ಯಾವುದೋ ಒಂದನ್ನು ಶ್ರೇಷ್ಠವೆಂದು ಹೇಳಿ ಉಳಿದವುಗಳನ್ನು ತೆಗಳುವುದಿಲ್ಲ. ಎಲ್ಲವೂ ಒಂದೇ ಗುರಿಯ ಎಡೆಗೆ ಇರುವ ಮಾರ್ಗಗಳು. ಮನುಷ್ಯರೆಲ್ಲ ಒಂದೇ ಪ್ರಕೃತಿ ಯವರಲ್ಲ. ಒಬ್ಬೊಬ್ಬರಲ್ಲಿ ಒಂದೊಂದು ಸ್ವಭಾವವಿರುವುದು. ಅವರು ತಮ್ಮ ಸ್ವಭಾವಕ್ಕೆ ತಕ್ಕ ಮಾರ್ಗವನ್ನು ಆರಿಸಿಕೊಳ್ಳ ಬೇಕಾಗಿದೆ. ಒಬ್ಬನಿಗೆ ಹಿಡಿಸುವುದು ಮತ್ತೊಬ್ಬನಿಗೆ ಹಿಡಿಸದೆ ಇರಬಹುದು. ಯಾವ ಒಂದು ಮಾರ್ಗವೂ ಮತ್ತೊಂದರಿಂದ ಸಂಪೂರ್ಣ ಪ್ರತ್ಯೇಕವಾಗಿಲ್ಲ. ಒಂದರಲ್ಲಿರುವುದು ಮತ್ತೊಂದ

ರಲ್ಲಿಯೂ ಇದೆ. ಆದರೆ ಒಂದು ಹೆಚ್ಚು ಮತ್ತೊಂದು ಕಡಿಮೆ ಅಷ್ಟು. ಮುಖ್ಯವಾಗಿ ನಮಗೆ ಗೀತೆಯಲ್ಲಿ ಈ ನಾಲ್ಕು ಮಾರ್ಗ ಗಳು ದೊರಕುತ್ತವೆ. ಅದೇ ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ ಮತ್ತು ಧ್ಯಾನಯೋಗ. ವಿಚಾರಪ್ರಧಾನರಾಗಿರು ವವರು ಕೆಲವರು ಜ್ಞಾನಮಾರ್ಗವನ್ನು ಆರಿಸಿಕೊಳ್ಳುವರು, ಕರ್ಮಪ್ರಧಾನರಾದವರು ಕರ್ಮಯೋಗವನ್ನು ಆರಿಸಿಕೊಳ್ಳು ವರು, ಭಾವಪ್ರಧಾನರಾಗಿರುವವರು ಭಕ್ತಿಯೋಗವನ್ನು ಆರಿಸಿ ಕೊಳ್ಳುವರು, ಮನಸ್ಸಿನ ಏಕಾಗ್ರತೆಯೊಂದರ ಸಹಾಯದಿಂದ ಹೋಗುತ್ತೇನೆ ಎನ್ನುವವನು ಧ್ಯಾನಯೋಗವನ್ನು ಆರಿಸಿಕೊಳ್ಳು ವನು. ಶ್ರೀಕೃಷ್ಣ ಅವರವರ ಭಾವಕ್ಕೆ ತಕ್ಕ ಮಾರ್ಗವನ್ನು ತೋರಿಸುವನು. ವಿಚಾರಿಗೆ ವಿಚಾರವಿದೆ. ಆದರೆ ಆ ವಿಚಾರ ದಲ್ಲಿ ಕರ್ಮ ಭಕ್ತಿ ಧ್ಯಾನ ಇಲ್ಲದೇ ಇಲ್ಲ. ಕರ್ಮಿಗೆ ಬೇಕಾದಷ್ಟು ಮಾಡಲು ಕರ್ಮ ದೊರಕುವುದು. ಆದರೆ ಇದು ಬರಿಯ ಯಾಂತ್ರಿಕವಾದ ಕರ್ಮವಲ್ಲ. ಅದರ ಹಿಂದೆ ಭಕ್ತಿಯಿದೆ. ಜ್ಞಾನವಿದೆ, ಧ್ಯಾನವೂ ಇದೆ. ಹಾಗೆಯೇ ಭಕ್ತಿಯಲ್ಲಿ ಬರಿಯ ಭಾವವೊಂದೇ ಅಲ್ಲ ಇರುವುದು. ವಿಚಾರವಿದೆ. ದೇವರನ್ನೇ ಏತಕ್ಕೆ ಪ್ರೀತಿಸಬೇಕು, ಉಳಿದವುಗಳನ್ನು ಪ್ರೀತಿಸಬಾರದು ಎಂಬುದನ್ನು ತೀರ್ಮಾನಿಸುವುದಕ್ಕೆ ವಿಚಾರ ಬೇಕಾದಷ್ಟು ಕೆಲಸ ಮಾಡಿರಬೇಕು. ಮನಸ್ಸಿನ ಏಕಾಗ್ರತೆಯೇ ಮುಖ್ಯವಾದ ಧ್ಯಾನಯೋಗದಲ್ಲಿ ಭಕ್ತಿ ಜ್ಞಾನವಿಲ್ಲದೆ ಇಲ್ಲ. ಗೀತೆಯಲ್ಲಿ ನಮಗೆ ಒದಗಿಬರುವುದು ಯಾವುದೋ ಒಂದು ಯೋಗವಲ್ಲ. ಅದು ಯೋಗಗಳ ಸಂಗಮ ಸ್ಥಳ.

ಜ್ಞಾನ: ಈ ಹಾದಿಯಲ್ಲಿ ಹೋಗುವವರು ಅತಿ ವಿರಳ. ಏಕೆಂದರೆ, ಇದು ವಿಚಾರಪ್ರಧಾನವಾಗಿರುವುದು. ಸಾಧಕ ತನ್ನ

ಎದುರಿಗೆ ಇರುವ ದೃಶ್ಯವನ್ನು ವಿಭಜನೆ ಮಾಡಬೇಕಾಗಿದೆ. ನಾವು ಯಾವಾಗಲೂ ಒಳಗೆ ಹೊರಗೆ ಎಂಬ ದ್ವಂದ್ವ ಪ್ರಪಂಚ ದಲ್ಲಿರುವೆವು. ಜ್ಞಾನಿಯಾಗಲಿಚ್ಛಿಸುವವನು ಹೊರಗಿನ ನಾಮ ರೂಪಗಳನ್ನು ವಿಭಜನೆಮಾಡಬೇಕು. ಒಳಗಿನ ದೇಹ ಇಂದ್ರಿಯ ಮನಸ್ಸು ಬುದ್ಧಿ ಅಹಂಕಾರಗಳನ್ನು ವಿಭಜನೆ ಮಾಡಬೇಕು. ಒಳಗಿನ ಉಪಾಧಿಗಳ ತೆರೆಯನ್ನು ತೆಗೆದುಹಾಕುವುದು ಅಷ್ಟು ಸುಲಭವಲ್ಲ. ಆ ಸಾಹಸ ಬಾಹ್ಯ ಸಾಹಸಗಳೆಲ್ಲಕ್ಕಿಂತಲೂ ಕಷ್ಟ. ಅದಕ್ಕೆ ನಮಗೆ ಚಿತ್ತಶುದ್ಧಿ ಇರಬೇಕು, ಇಂದ್ರಿಯಗಳನ್ನು ಜಯಿಸಿರಬೇಕು, ಮನಸ್ಸು ಸಮಾಧಾನವಾಗಿರಬೇಕು, ಬುದ್ಧಿ ಹರಿತವಾಗಿರಬೇಕು, ಆಗ ಮಾತ್ರ ಈ ಹಾದಿಯಲ್ಲಿ ನಡೆದು ಕೊಂಡುಹೋಗಿ ಗುರಿಯನ್ನು ಸೇರಬಹುದು. ಇಲ್ಲಿ ತಾನು ಸತ್ಯವನ್ನು ಕಾಣಬೇಕು. ಅದರಲ್ಲಿ ಒಂದಾಗಬೇಕು ಎಂಬುದೊಂದೇ ಮುಖ್ಯವಾಗಿರಬೇಕು. ಇದಕ್ಕಾಗಿ ಅವನು ತನ್ನ ಪೂರ್ವ ಕಲ್ಪಿತ ಅಭಿಪ್ರಾಯಗಳನ್ನೆಲ್ಲ ಬಲಿಕೊಡಬೇಕು. ಸತ್ಯ ಎಲ್ಲಿಗೆ ಕೊಂಡೊಯ್ದರೆ ಅಲ್ಲಿಗೆ ಹೋಗಲು ಸಿದ್ಧನಾಗಿರಬೇಕು. ಈ ಮಾರ್ಗದಲ್ಲಿ ಹೋಗಬಯಸುವವನಿಗೆ ಸಾಕಷ್ಟು ಪ್ರೋತ್ಸಾಹವಿದೆ ಗೀತೆಯಲ್ಲಿ.

ಕರ್ಮ: ಕರ್ಮ ಎಂದರೆ ಕೆಲಸ ಮಾಡುವುದು. ಕರ್ಮ ಯೋಗವೆಂದರೆ ಕೆಲಸದ ಮೂಲಕವಾಗಿಯೇ ಚಿತ್ತಶುದ್ಧಿಯನ್ನು ಮಾಡಿಕೊಂಡು ದೇವರ ಸಮೀಪಕ್ಕೆ ಹೋಗುವುದು. ಕರ್ಮ ವನ್ನು ಹೇಗೆ ಕರ್ಮಯೋಗವನ್ನಾಗಿ ಮಾರ್ಪಡಿಸಬೇಕು ಎಂಬು ದನ್ನು ಶ್ರೀಕೃಷ್ಣ ಕರ್ಮಯೋಗದಲ್ಲಿ ವಿವರಿಸುವನು. ಹಾಗೆ ವಿವರಿಸುವಾಗ ಕರ್ಮಮಾಡುವವರೆಲ್ಲ ಮೇಲೆ ಕೆಳಗೆ ಹಲವು ಮೆಟ್ಟಿಲುಗಳಲ್ಲಿ ನಿಂತಿರುವರು ಎನ್ನುವನು. ಯಾರೂ ಕೆಳಗೆ

ಇರುವವರನ್ನು ನೋಡಿ ತಿರಸ್ಕರಿಸಬೇಕಾಗಿಲ್ಲ. ಮೇಲೆ ಇರುವವರನ್ನು ನೋಡಿ ಅಸೂಯೆಪಡಬೇಕಾಗಿಲ್ಲ. ಕೆಳಗಿರುವವರನ್ನು ನೋಡಿದಾಗ ಒಂದು ಕಾಲದಲ್ಲಿ ನಾವೂ ಹೀಗೆಯೇ ಇದ್ದೆವು ಎಂದು ಅವರಿಗೆ ಸಹಾನುಭೂತಿಯನ್ನು ತೋರಬೇಕು. ನಮಗಿಂತ ಮುಂದೆ ಇರುವವರನ್ನು ನೋಡಿದಾಗ, ನಾನು ಹೀಗೆಯೇ ಸಾಧನೆ ಮಾಡುತ್ತ ಹೋದರೆ ಒಂದಲ್ಲ ಒಂದುಸಲ ಅಲ್ಲಿಗೆ ಸೇರಬಹುದು ಎಂದು ತಿಳಿದುಕೊಳ್ಳಬೇಕು. ಎಲ್ಲರೂ ತಾವಿರುವ ಸ್ಥಳದಿಂದ ಮುಂದೆ ಹೋಗಿ ಗುರಿಯನ್ನು ಸೇರಲಿ ಎನ್ನುವುದೇ ಹೊರತು ಗೀತೆ ಯಾರನ್ನೂ ಟೀಕಿಸುವುದಿಲ್ಲ.

ಈ ಪ್ರಪಂಚದಲ್ಲಿರುವವರೆಲ್ಲ ಕರ್ಮದಲ್ಲಿ ನಿರತರಾಗಿರುವರು. ಕರ್ಮ ಇಲ್ಲದೆ ಯಾರೂ ಇರಲಾರರು. ಎಲ್ಲರೂ ಏನನ್ನಾದರೂ ಮಾಡುತ್ತಿರುವರು. ನಾನು ಕೆಲಸವನ್ನು ಮಾಡುವುದೇ ಇಲ್ಲ ಎಂದು ಶಪಥ ತೊಟ್ಟವನೂ ಕೂಡ ತೆಪ್ಪಗೆ ಕುಳಿತಿರಲಾರ. ಹೊರಗೆ ಮಾಡದೇ ಇದ್ದರೆ ಮನಸ್ಸಿನಲ್ಲಿಯೇ ತಿರುಕನಂತೆ ಕನಸು ಕಟ್ಟಿಕೊಳ್ಳುತ್ತಿರುವನು. ಕರ್ಮ ಮಾಡುವುದೇ ನಮ್ಮ ಸ್ವಭಾವ. ಅದಕ್ಕೆ ವಿರೋಧವಾಗಿ ಯಾರೂ ಹೋಗುವುದಕ್ಕೆ ಆಗುವುದಿಲ್ಲ. ಹಾಗೆ ನಾನು ಹೋಗಿರುವೆನು ಎಂದು ಭಾವಿಸಿದರೂ ನಮಗೆ ಗೊತ್ತಿಲ್ಲದೇ ಅದಕ್ಕೆ ಅಡಿಯಾಳಾಗಿರುವೆವು.

ಕರ್ಮದಲ್ಲಿ ಅತ್ಯಂತ ಕೆಳಗಿರುವುದೇ ಜೀವನೋಪಾಯಕ್ಕೆ, ಲಾಭಕ್ಕೆ, ಹೆಸರಿಗೆ, ಅಧಿಕಾರಕ್ಕೆ ಕೆಲಸಮಾಡುವುದು. ಬಹುಪಾಲು ಜನ ಈ ಗುಂಪಿಗೆ ಸೇರಿರುವರು. ತಮಗೆ ತಮ್ಮ ಸಂಸಾರಕ್ಕೆ ಹೊಟ್ಟೆಗೆ ಬಟ್ಟೆಗೆ ಇದಕ್ಕಾಗಿ ಎಲ್ಲರೂ ಕರ್ಮ ಕ್ಷೇತ್ರದಲ್ಲಿ ತೊಡಗಿರುವರು. ಕೆಲವು ಜನರಿಗೆ ಬರೀ ಹೊಟ್ಟೆಗೆ ಬಟ್ಟೆಗೆ ಮಾತ್ರ ಸಿಕ್ಕಿದರೆ ಸಾಲದು. ಹೆಚ್ಚು ಬೇಕು. ಚೆನ್ನಾಗಿ

ಬಾಳಬೇಕು. ಜನರಲ್ಲಿ ಗಣ್ಯರು ಎನ್ನಿಸಿಕೊಳ್ಳಬೇಕು. ಚಲಾಯಿಸುವುದಕ್ಕೆ ಅಧಿಕಾರ ಇರಬೇಕು. ಇದಿಲ್ಲದೇ ಇದ್ದರೆ ಜೀವನ ನೀರಸವಾಗುವುದು. ಇದಕ್ಕಾಗಿ ಸಮಾಜದಲ್ಲಿ ತಮ್ಮ ಬಯಕೆಯನ್ನು ಈಡೇರಿಸಿಕೊಳ್ಳುವುದಕ್ಕಾಗಿ ಯಾವುದಾದರೂ ಒಂದು ಆದರ್ಶವನ್ನು ತೆಗೆದುಕೊಂಡು ಹೋರಾಡುವರು.

ಇವನಿಗಿಂತ ಮೇಲೆ ಸಮಾಜ ಸುಧಾರಕನು ಇರುವನು. ಅವನಿಗೆ ಲಾಭ ಬೇಕಾಗಿಲ್ಲ, ಕೀರ್ತಿ ಬೇಕಾಗಿಲ್ಲ. ಸಮಾಜದಲ್ಲಿ ಬೇಕಾದಷ್ಟು ಅನೈರ್ಮಲ್ಯವಿದೆ, ಅದನ್ನು ನಿವಾರಣೆ ಮಾಡಬೇಕು. ಜನರಲ್ಲಿ ಅಜ್ಞಾನವಿದೆ, ಅದನ್ನು ನಿವಾರಣೆ ಮಾಡಬೇಕು. ರೋಗರುಜಿನಗಳಿವೆ. ಅದನ್ನು ನಿವಾರಣೆ ಮಾಡಬೇಕು. ಅಂತೂ ಅವನ ಗುರಿ ತನ್ನಿಂದ ಹೊರಗೆ ಇರುವ ಎಡವಟ್ಟನ್ನು ಸರಿ ಮಾಡಬೇಕು ಎನ್ನುವುದು. ಅದರಿಂದ ನಿನಗೇನು ಸಿಕ್ಕುವುದು ಎಂದರೆ, ಹಾಗೆ ಕೆಲಸಮಾಡುವುದೇ ಸಂತೋಷ ಎನ್ನುವನು. ಮನುಷ್ಯರು ಕೆಲಸಮಾಡಬೇಕಾಗಿದೆ. ಇತರರಿಗೆ ಕೆಲಸಮಾಡುವುದರಲ್ಲಿ ಒಂದು ಆನಂದವಿದೆ, ಅದಕ್ಕಾಗಿ ಮಾಡುವೆನು ಎನ್ನುತ್ತಾನೆ.

ಇವನಿಗಿಂತಲೂ ಮೇಲಿರುವವನು ಪ್ರಪಂಚವನ್ನು ತಿದ್ದಬೇಕು ಎಂದು ಕೆಲಸಮಾಡುವುದಿಲ್ಲ. ತನ್ನನ್ನೇ ತಿದ್ದಿಕೊಳ್ಳುವುದಕ್ಕೆ ಈ ಕರ್ಮಗಳು ಸಹಾಯಮಾಡುತ್ತವೆ ಎಂಬ ದೃಷ್ಟಿಯಿಂದ ಕೆಲಸ ಮಾಡುವನು. ಈ ಪ್ರಪಂಚವನ್ನು ನೇರಮಾಡುವುದಕ್ಕೆ ಎಷ್ಟೋ ಜನ ಮಹಾತ್ಮರು ಬಂದರು, ಪ್ರಯತ್ನವನ್ನೂ ಮಾಡಿದರು. ಆದರೆ ಈ ಪ್ರಪಂಚ ಯಾವಾಗಲೂ ನಾಯಿ ಬಾಲದಂತೆ ಡೊಂಕು. ಬಲಾತ್ಕಾರವಾಗಿ ಅದನ್ನು ನೇರಮಾಡಿ ಹಿಡಿದು ಕೊಂಡಿರುವವರೆಗೆ ಅದು ನೇರವಾಗಿರುವುದು. ಸ್ವಲ್ಪ ಸಡಿಲ

ಮಾಡಿದರೆ ಅದು ಪಕ್ವವಾಗುವುದು. ಆದರೆ ತನ್ನ ಮನಸ್ಸಿನ ಕಶ್ಮಲವನ್ನು ಕಡಿಮೆಮಾಡಿಕೊಳ್ಳುವುದಕ್ಕೆ, ತನ್ನ ಹೃದಯವನ್ನು ವಿಕಾಸವಾಡಿಕೊಳ್ಳುವುದಕ್ಕೆ ಇದೊಂದು ಅವಕಾಶ ಎಂದು ಅವನು ಕರ್ಮ ಮಾಡುವನು. ಯಾವಾಗ ಇಂತಹ ದೃಷ್ಟಿಯಿಂದ ಕರ್ಮ ಮಾಡುವನೋ ಆಗ ಅವನ ಚಿತ್ತ ಶುದ್ಧವಾಗಿ ಜ್ಞಾನ ಪ್ರಾಪ್ತವಾಗುವುದು. ಎಂತಹ ವಿಧವಾದ ಕರ್ಮವಾದರೂ ಆಗಲಿ ಅದನ್ನು ಅನಾಸಕ್ತಿಯಿಂದ ಮಾಡುತ್ತಿರುವನಾದರೆ ಅವನಿಗೆ ಜ್ಞಾನ ಪ್ರಾಪ್ತವಾಗುವುದೆಂದು ಶ್ರೀಕೃಷ್ಣ ಸಾರುವನು. ಜ್ಞಾನ ವೇದೋಪನಿಷತ್ತುಗಳಲ್ಲಿ ಮಾತ್ರ ಹುದುಗಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಅದು ಶುದ್ಧವಾದ ಚಿತ್ತದಲ್ಲಿದೆ.

ಇದಕ್ಕಿಂತ ಮೇಲಿನ ಮೆಟ್ಟಿಲು ಒಂದು ಇದೆ. ಒಬ್ಬನಿಗೆ ಚಿತ್ತಶುದ್ಧವಾಗಿದೆ. ಜ್ಞಾನ ಸಿಕ್ಕಿದೆ. ಅವನೇತಕ್ಕೆ ಇನ್ನು ಕರ್ಮ ಮಾಡಬೇಕು ಎಂದು ಕೇಳಬಹುದು. ಅಂತಹ ಮನುಷ್ಯನ ಮೇಲೆ ಇನ್ನೊಬ್ಬರಿಗೆ ದಾರಿಯನ್ನು ತೋರುವ ಒಂದು ಜವಾಬ್ದಾರಿ ಬೀಳುವುದು. ಆಗ ಲೋಕಸಂಗ್ರಹಕ್ಕಾದರೂ ಅವನು ಕರ್ಮವನ್ನು ಮಾಡಬೇಕು. ಎಂದು ಒಂದು ಜೀವಿ ಇಂತಹ ಸ್ಥಿತಿಗೆ ಏರುವನೋ, ಆಗ ತಾನು ನಾಯಕ ಎಂದು ಅವನು ಭಾವಿಸದೇ ಇದ್ದರೂ ಸುತ್ತಮುತ್ತಲಿನ ಜನ ಅವನನ್ನು ಅನುಸರಿಸುವರು. ಯಾವಾಗ ಅನುಸರಿಸುವರೋ ಆಗ ಅವರಿಗೆ ಶ್ರೇಯಸ್ಸಾಗುವ ರೀತಿಯಲ್ಲಿ ನಾವು ಕೆಲಸ ಮಾಡಬೇಕು. ಶ್ರೀ ಕೃಷ್ಣನೇ ಅದಕ್ಕೆ ಉದಾಹರಣೆ. "ನನಗೆ ಈ ಮೂರು ಲೋಕಗಳಲ್ಲಿ ಕರ್ಮದಿಂದ ಏನೂ ಬೇಕಾಗಿಲ್ಲ. ಆದರೂ ನಾನು ಕರ್ಮದಲ್ಲಿ ನಿರತನಾಗಿರುವೆನು. ಇಲ್ಲದೇ ಇದ್ದರೆ ಜನ ನನ್ನನ್ನು ಅನುಸರಿಸಿ ಹಾಳಾಗುವರು" ಎನ್ನುವನು. ಕರ್ಮದಲ್ಲಿ ಹಲವು ಅಂತರಗಳನ್ನು ಮೆಟ್ಟಿಲು ಮೆಟ್ಟಿಲಾಗಿ

ಇಡುವನು. ಒಬ್ಬನು ತಾನು ಯಾವ ಮೆಟ್ಟಲಿನಲ್ಲಿ ಇರುವನೊ ಅದನ್ನು ತಿಳಿದುಕೊಂಡು ತನಗಿಂತ ಹಿಂದೆ ಇರುವವನನ್ನು ಹೀಯಾಳಿಸದೆ ಮುಂದೆ ನಡೆದುಕೊಂಡು ಹೋಗಬೇಕು. ಇದೇ ಶ್ರೀಕೃಷ್ಣನ ಬೋಧನೆ.

ಭಕ್ತಿ: ಬಹುಪಾಲು ಜನ ಪೂರ್ಣತೆಯ ಎಡೆಗೆ ನಡೆದು ಹೋಗುವ ದಾರಿ ಇದು. ಏಕೆಂದರೆ, ಭಕ್ತಿ ಮಾನವನಲ್ಲಿ ಸಹಜ ವಾಗಿರುವುದು. ಅದು ಧ್ವಂಸಕಾರಿಯಲ್ಲ. ದೇವರನ್ನು ಯಾವ ಯಾವರೂ ಆಕಾರದಿಂದ ಕರೆದು ಪ್ರೀತಿಸುವನು. ನಾವೆಲ್ಲ ದೇಹ ಧಾರಿಗಳು. ಆದಕಾರಣ ನಮ್ಮ ದೇವರೂ ಕೂಡ ಸಾಕಾರ ನಾಗಿರಲೇಬೇಕಾಗಿದೆ. ನಾವು ದೇಹ ಮನಸ್ಸು ಬುದ್ಧಿ ಇಂದ್ರಿಯ ಗಳಿಂದ ವಿಾರಿ ಹೋದರೆ ಆಗ ದೇವರನ್ನು ನಿರಾಕಾರವಾಗಿ ಚಿಂತಿಸಬಹುದು.

ನಾವು ಯಾವ ಆಕಾರದ ಮೂಲಕ ಪ್ರೀತಿಸಿದರೆ ಅವನು ಆ ಆಕಾರದ ಮೂಲಕ ಒಲಿಯುತ್ತಾನೆ. ಪ್ರತಿಯೊಬ್ಬರಿಗೂ ಆಯಾ ಆಕಾರದಲ್ಲಿರುವ ಭಕ್ತಿಯನ್ನು ದೇವರು ನೃಢಮಾಡು ತ್ತಾನೆ. ಶ್ರೀಕೃಷ್ಣ ಇಂತಹ ಆಕಾರವೇ ಮೇಲು, ಇಂತಹ ಆಕಾರವೇ ಕೀಳು ಎನ್ನುವ ತಂಟೆಗೆ ಹೋಗುವುದಿಲ್ಲ. ನಮ್ಮ ಶ್ರದ್ಧೆ ಭಕ್ತಿಗೆ ತಕ್ಕಂತೆ ಪ್ರತಿಫಲ ದೊರಕುವುದು.

ಯಾವಾಗ ನಾವು ಅವನನ್ನು ಒಂದು ಆಕಾರವೆಂದು ಭಾವಿಸು ವೆವೊ. ಆಗ ಅವನನ್ನು ಮಾನವಸಹಜವಾದ ರೀತಿಯಲ್ಲಿ ಪ್ರೀತಿಸಬೇಕಾಗಿದೆ. ಅವನನ್ನು ತಂದೆ ತಾಯಿ ಸ್ವಾಮಿ ಸಖ ಪ್ರಿಯತಮ ಎಂಬ ಭಾವವನ್ನೆಲ್ಲ ಅವನ ಮೇಲೆ ಆರೋಪಿಸ ಬೇಕಾಗುವುದು. ಯಾವಾಗ ಅವನು ಸಾಕಾರವಾಗುವನೊ ಆಗ ಅವನಿಗೆ ನೈವೇದ್ಯಾದಿಗಳನ್ನು ಅರ್ಪಿಸುತ್ತೇವೆ. ನಮ್ಮ ಹತ್ತಿರ

ಏನು ಇರುವುದೊ ಅದನ್ನು ಅವನಿಗೆ ಕೊಡಬಹುದು. ಅವನು ಅದನ್ನು ಸ್ವೀಕರಿಸುತ್ತಾನೆ. "ಯಾವನು ನನಗೆ ಎಲೆಯನ್ನಾಗಲಿ ಹೂವನ್ನಾಗಲಿ ಹಣ್ಣನ್ನಾಗಲಿ ನೀರನ್ನಾಗಲಿ ಭಕ್ತಿಯಿಂದ ಕೊಡುವನೊ. ಅಂತಹ ಶುದ್ಧಚಿತ್ತವುಳ್ಳವನು ಭಕ್ತಿಯಿಂದ ಅರ್ಪಿಸಿದ ಅದನ್ನು ನಾನು ಸ್ವೀಕರಿಸುತ್ತೇನೆ" ಎನ್ನುವನು ಶ್ರೀಕೃಷ್ಣ.

ಭಕ್ತನಾದ ಸಾಧಕನಿಗೆ ಒಂದು ಅವತಾರದ ಊರುಗೋಲು ಆವಶ್ಯಕ. ಶ್ರೀಕೃಷ್ಣ ಅದಕ್ಕೂ ಒಂದು ಭರವಸೆಯನ್ನು ಕೊಡುತ್ತಾನೆ: "ಯಾವಾಗ ಧರ್ಮದ ಅವನತಿ ಆಗುವುದೊ. ಅಧರ್ಮದ ಉನ್ನತಿಯಾಗುವುದೊ ಆಗ ನಾನು ಅವತಾರ ಮಾಡುತ್ತೇನೆ. ಸಾಧುಗಳ ರಕ್ಷಣೆಗಾಗಿಯೂ ದುಷ್ಟರ ವಿನಾಶ ಕ್ಕಾಗಿಯೂ ಮತ್ತು ಧರ್ಮದ ಸಂಸ್ಥಾಪನೆಗಾಗಿಯೂ ಪ್ರತಿ ಯುಗದಲ್ಲಿಯೂ ಅವತರಿಸುತ್ತೇನೆ". ಇಲ್ಲಿ ಶ್ರೀಕೃಷ್ಣ ಯುಗ ಯುಗದಲ್ಲಿ ಅವತರಿಸುತ್ತೇನೆ ಎಂದರೆ ಸಂದಿಗ್ಧ ಸಮಯ ಯಾವಾಗ ಬರುವುದೋ. ಸಾಧಾರಣ ಮಾನವನ ಕೈಯಲ್ಲಿ ಸಮಸ್ಯೆಯನ್ನು ಎದುರಿಸಲು ಯಾವಾಗ ಆಗುವುದಿಲ್ಲವೋ ಆಗ ಭಗವಂತನೇ ಅವತರಿಸಿ ಬಂದು ಅಧರ್ಮವನ್ನು ನಾಶಮಾಡಿ. ಧರ್ಮವನ್ನು ಸಂಸ್ಥಾಪನೆ ಮಾಡುವನು ಎಂದು. "ಅವನ ಅವತಾರ ದಿವ್ಯವಾದುದು. ಅವನು ಮಾಡುವ ಕರ್ಮ ದಿವ್ಯ ವಾದುದು. ಅಂತಹ ಅವತಾರವನ್ನು ಯಾರು ಯಥಾರ್ಥವಾಗಿ ತಿಳಿಯುವರೊ ಅವರು ದೇಹವನ್ನು ತ್ಯಾಗಮಾಡಿದ ಮೇಲೆ ಪುನರ್ಜನ್ಮವನ್ನು ಹೊಂದುವುದಿಲ್ಲ: ಅವರು ನನ್ನನ್ನೇ ಹೊಂದು ವರು" ಎನ್ನುವನು. ಯಾವುದಾದರೂ ಒಂದು ಅವತಾರದ ಮೇಲೆ ಶ್ರದ್ಧೆ ಭಕ್ತಿ ಇಟ್ಟು ಸಾಧನೆಮಾಡಿದರೆ ಸಾಕು. ಅವನು

ನಮ್ಮನ್ನು ಅವನೆಡೆಗೆ ಸೆಳೆದುಕೊಳ್ಳುವನು. ಗಂಗಾನದಿಗೆ ಇರುವ ಹಲವು ಘಾಟುಗಳಂತೆ ಅವತಾರ. ಯಾವ ಘಾಟಿನಲ್ಲಿ ಸ್ನಾನ ಮಾಡಿದರೂ ಗಂಗೆಯಲ್ಲಿಯೇ ಸ್ನಾನ ಮಾಡಿದಂತೆ ಆಗುವುದು. ಭಕ್ತನಿಗೆ ಯಾವ ಯಾವ ವ್ಯಕ್ತಿಯ ಮೇಲೆ ಶ್ರದ್ಧೆ ಇದೆಯೋ ಅದನ್ನು ಮತ್ತೂ ಊರ್ಜಿತವಮಾಡುವನೇ ಹೊರತು ಎಂದಿಗೂ ಅದನ್ನು ಕಿತ್ತು ಹಾಕುವುದಿಲ್ಲ ಶ್ರೀಕೃಷ್ಣ.

ದೇವರು ಹೇಗೆ ಅವತಾರದಲ್ಲಿ ವ್ಯಕ್ತವಾಗಿರುವನೊ ಹಾಗೆಯೇ ಈ ಪ್ರಪಂಚದಲ್ಲಿಯೂ ವ್ಯಕ್ತವಾಗಿರುವನು: "ಯಾವ ಯಾವ ವಸ್ತು ವಿಭೂತಿಯುಳ್ಳದ್ದೋ ಶ್ರೀಯುತವೋ, ಊರ್ಜಿತ ವಾಗಿದೆಯೋ ಅವೆಲ್ಲ ನನ್ನ ತೇಜಸ್ಸಿನ ಒಂದು ಅಂಶದಿಂದ ಉಂಟಾಯಿತು ಎಂದು ತಿಳಿದುಕೊ" ಎನ್ನುವನು. ಇಲ್ಲಿ ಶ್ರೀಕೃಷ್ಣ ಹೇಳುವುದು ಕೇವಲ ಹಿಂದೂಗಳಿಗೆ ಮಾತ್ರ ಅನ್ವಯಿಸು ವುದಲ್ಲ; ಇದೀ ಮಾನವಕೋಟಿಗೆಲ್ಲ ಅನ್ವಯಿಸುವುದು. ಇಂತಹ ಉದಾರವಾದ ವಾಣಿಯನ್ನು ನಾವು ಕೇಳುವುದು ಬಹಳ ಅಪರೂಪ.

ಹೇಗೆ ಕರ್ಮ ಮಾಡುವವರು ಹಲವು ಮೆಟ್ಟಿಲಿನಲ್ಲಿ ಇರು ವರೋ ಹಾಗೆಯೇ ಭಕ್ತರಲ್ಲಿಯೂ ನಾಲ್ಕು ಮೆಟ್ಟಿಲಿನಲ್ಲಿ ಇರುವವರನ್ನು ಕುರಿತು ಹೇಳುವನು. "ಆರ್ತ ಜಿಜ್ಞಾಸು ಅರ್ಥಾರ್ಥಿ ಜ್ಞಾನಿ ಎಂಬ ನಾಲ್ಕು ಬಗೆಯ ಸುಕೃತಿಗಳಾದ ಜನರು ನನ್ನನ್ನು ಭಜಿಸುತ್ತಾರೆ. ಅವರಲ್ಲಿ ನಿತ್ಯಭಕ್ತನೂ ಏಕ ಭಕ್ತಿಯುಳ್ಳವನೂ ಆದ ಜ್ಞಾನಿ ಶ್ರೇಷ್ಠ. ನಾನು ಜ್ಞಾನಿಗೆ ಅತ್ಯಂತ ಪ್ರಿಯ, ಅವನು ನನಗೆ ಅತ್ಯಂತ ಪ್ರಿಯ. ಆದರೂ ಇವರೆಲ್ಲರೂ ಉದಾರಿಗಳೇ ಸರಿ."

ಭಕ್ತರಲ್ಲಿ ಒಂದು ಗುಂಪಿಗೆ ಸೇರಿದವನೆ ಆರ್ತ. ಸಂಕಟಕ್ಕೆ

ಸಿಕ್ಕಿದವನು. "ಸಂಕಟ ಬಂದಾಗ ವೆಂಕಟರಮಣ" ಎಂಬ ಗಾದೆ ಅಕ್ಷರಶಃ ನಿಜ. ಮತ್ತೆ ಯಾವ ಕಾಲದಲ್ಲಿ ದೇವರ ಕಡೆಗೆ ಮನಸ್ಸು ಹೋಗದೆ ಇದ್ದರೂ ಸಂಕಟ ಬಂದಾಗ ಅದರ ನಿವಾರಣೆಗೆ ಏನೇನೋ ಪ್ರಯತ್ನ ಮಾಡುವನು. ಕೊನೆಗೆ ದೇವರ ಹತ್ತಿರ ಬಂದು ಅದನ್ನು ನಿವೇದಿಸಿಕೊಳ್ಳುವನು. ದೇವರು ಅವನ ಬೇಡಿಕೆಯನ್ನು ಕೇಳಿ ಸಮಾಧಾನಮಾಡುವನು. ಏನನ್ನು ಕೇಳಿದರೂ ಅವನು ಇಲ್ಲ ಎನ್ನುವುದಿಲ್ಲ. ನಾವು ಕೇಳುವ ರೀತಿಯಲ್ಲಿ ಕೇಳಬೇಕು. ಅವನೊಂದು ಕಲ್ಪತರು. ಅದರ ಕೆಳಗೆ ನಾವು ನಿಂತುಕೊಂಡು ಏನನ್ನು ಪ್ರಾರ್ಥಿಸಿದರೂ ಅವನು ನಮ್ಮನ್ನು ನಿರಾಶರಾಗಿ ಕಳುಹಿಸುವುದಿಲ್ಲ. ಭಕ್ತರಲ್ಲಿ ಈ ಗುಂಪಿಗೆ ಸೇರಿದವರೇ ಬಹುಮಂದಿ. ಸಂಕಟದ ಚಾವಟಿ ಪೆಟ್ಟಿನಿಂದ ಪಾರಾಗಲು ದೇವರನ್ನು ಇವರು ಆಶ್ರಯಿಸುವರು.

ಎರಡನೆಯ ಗುಂಪಿಗೆ ಸೇರಿದವನೆ ಧನಾಕಾಂಕ್ಷಿ. ಅವನಿಗೆ ಧನ ಬೇಕು. ಧನವೊಂದೇ ಪ್ರಪಂಚದಲ್ಲಿ ಸುಖ ಕೊಡುವುದು, ಭೋಗ ಕೊಡುವುದು, ಅದಿದ್ದರೇ ಒಬ್ಬ ಗಣ್ಯನಾಗುವುದು ಎಂಬುದನ್ನು ನೋಡಿರುವನು. ದೇವರು ಕಲ್ಪತರು ಎಂಬುದನ್ನು ಕೇಳಿರುವನು. ಅದಕ್ಕೆ ಅವನ ಬಳಿಗೆ ಬರುವನು. ವ್ಯಾಪಾರಾದಿ ಉದ್ಯಮದಲ್ಲಿ ಮುಂದಕ್ಕೆ ಬಂದರೆ ಹಲವು ಉತ್ಸವಗಳನ್ನು ಮಾಡಿಸುತ್ತೇನೆ ಎನ್ನುವನು. ಈತ ದೇವರನ್ನು ಪ್ರಾರ್ಥಿಸುವನು. ಅವನು ಬಂದರೆ ಧನವನ್ನು ನೀಡು ಎಂದು ತನ್ನ ಜೋಳಿಗೆ ಯನ್ನು ತೋರುವನು.

ಮೂರನೆಯ ಗುಂಪಿಗೆ ಸೇರಿದವನೆ ಜಿಜ್ಞಾಸು. ಇವನು ವಿಚಾರಪ್ರಧಾನನಾಗಿರುವ ಮನುಷ್ಯ. ಈ ಪ್ರಪಂಚದಲ್ಲಿ ಯಾವುದಾದರೂ ಸಾರವಸ್ತುವಿದೆಯೇ, ಇದ್ದರೆ ಅದು ಹೇಗಿದೆ.

ಇವನ್ನು ತಿಳಿದುಕೊಳ್ಳಬಯಸುವನು. ಅವನಿಗೆ ಸಂಕಟವಿಲ್ಲ. ಧನದ ಆಕಾಂಕ್ಷೆಯಿಲ್ಲ. ಮನಸ್ಸಿನಲ್ಲಿ ಹಲವು ಸಂದೇಹಗಳಿವೆ. ಇವುಗಳಲ್ಲಿ ಯಾವುದು ಸತ್ಯ ಅದನ್ನು ತಿಳಿದುಕೊಳ್ಳಬೇಕೆಂದು ಬಯಸುವವನು. ತನ್ನ ಮನಸ್ಸಿನಲ್ಲಿ ಚುಚ್ಚುತ್ತಿರುವ ಸಂಶಯದ ಮುಳ್ಳಿನಿಂದ ಪಾರಾಗುವುದಕ್ಕೆ ಇವನು ಬರುವನು.

ನಾಲ್ಕನೆಯವನೇ ಜ್ಞಾನಿ. ಅವನು ದೇವರೆಡೆಗೆ ಬರುತ್ತಾನೆ. ಅವನಿಗೆ ದೇವರ ಖಜಾನೆಯಲ್ಲಿರುವ ಯಾವ ವಸ್ತುಗಳೂ ಬೇಕಿಲ್ಲ. ದೇವರ ಮೇಲಿನ ಪ್ರೇಮಕ್ಕಾಗಿ ಬರುತ್ತಾನೆ. ಅವನ ಭಕ್ತಿ ದೇವರಿಂದ ಏನನ್ನೂ ವಸೂಲಿ ಮಾಡುವುದಕ್ಕಲ್ಲ. ಈ ಪ್ರಪಂಚದಲ್ಲಿ ಅವನೊಬ್ಬನೇ ಸತ್ಯ ಎಂಬುದು ಗೊತ್ತಿದೆ ಅವನಿಗೆ. ಪ್ರೀತಿಸುವುದಕ್ಕೆ ಯೋಗ್ಯವಾದ ವ್ಯಕ್ತಿ ಅವನೊಬ್ಬನೇ ಎಂಬುದು ಅವನಿಗೆ ಹೃದ್ಗತವಾಗಿದೆ. ಅವನೊಬ್ಬ ಸಿಕ್ಕಿದರೆ ಅವನಿಗೆ ಉಳಿದೆಲ್ಲವೂ ಸಿಕ್ಕಿದಂತೆ. ಏಕೆಂದರೆ, ಅವನು ಪೂರ್ಣ. ದೇವರಿಗೆ ಇಂತಹ ಭಕ್ತನನ್ನು ಕಂಡರೆ ಪ್ರೀತಿ. ಭಕ್ತನಿಗೆ ಇಂತಹ ದೇವರನ್ನು ಕಂಡರೆ ಪ್ರೀತಿ. ಈ ನಾಲ್ಕು ಜನರಲ್ಲಿ ಕೊನೆಯ ಗುಂಪಿಗೆ ಸೇರಿದವನೇ ಶ್ರೇಷ್ಠ. ಆದರೆ ಉಳಿದವರನ್ನು ಶ್ರೀಕೃಷ್ಣ ನಿಕೃಷ್ಟವಾಗಿ ನೋಡುವುದಿಲ್ಲ. ಅವರೆಲ್ಲರನ್ನೂ ಉದಾರಿಗಳೇ ಎನ್ನುವನು. ಏಕೆಂದರೆ, ಅವನೆದುರಿಗೆ ಇಡೀ ಮಾನವನ ವಿಕಾಸದ ಮೆಟ್ಟಿಲುಗಳು ಕಾಣುತ್ತಿವೆ. ಈಗ ಸಂಕಟದಿಂದ ಪಾರಾಗಲು ದೇವರೆಡೆಗೆ ಬರುವವನೆ, ಇನ್ನು ಕೊಂಚ ಕಾಲದ ಮೇಲೆ ಅವನನ್ನು ತಿಳಿಯಲು ಇಚ್ಛಿಸುತ್ತಾನೆ. ಅವನೇ ಅನಂತರ ಕೇವಲ ಪ್ರೀತಿಗಾಗಿ ಪ್ರೀತಿಸುವ ಪರಾಭಕ್ತನಾಗುತ್ತಾನೆ ಎಂಬುದು ಗೊತ್ತಿದೆ. ಇವರು ತಮ್ಮ ಇಚ್ಛೆಯ ಪೂರ್ಣತೆಗೆ ಬೇರೆ ಬೇರೆ ಕಡೆ ಹೋಗುವುದನ್ನು ಬಿಟ್ಟು ನನ್ನ ಹತ್ತಿರ ಬಂದರಲ್ಲ ಎಂದು

ಅಷ್ಟನ್ನೇ ಹೊಗಳುತ್ತಾನೆ. ಅಂತೂ ಹೇಗೋ, ಯಾವುದರಿಂದಲಾದರೂ ಪ್ರೇರಿತರಾಗಿ ಅವನೆಡೆಗೆ ಬಂದರೆ ಸಾಕು. ಅವರನ್ನು ಮೇಲೆತ್ತುವುದಕ್ಕೆ ಕಾದು ಕುಳಿತಿರುವನು ಪರಮಾತ್ಮ.

ಧ್ಯಾನ: ಧ್ಯಾನ ಎಂದರೆ ಬರೀ ಕಣ್ಣು ಮುಚ್ಚಿಕೊಂಡು ಕುಳಿತುಕೊಳ್ಳುವುದಲ್ಲ. ಇದು ಮನಸ್ಸಿನ ಚಾಂಚಲ್ಯವನ್ನು ತಡೆಗಟ್ಟಿ ಅದನ್ನು ಪರಮಾತ್ಮನ ಕಡೆಗೆ ಹರಿಸುವುದು. ತೈಲಧಾರೆಯಂತೆ ಅಖಂಡವಾಗಿ ಮನಸ್ಸು ದೇವರ ಕಡೆಗೆ ಹೋಗುತ್ತಿರಬೇಕು. ಒಂದು ನದಿ ಸಾಗರವನ್ನು ಸೇರುವಂತೆ ಜೀವಾತ್ಮ ಪರಮಾತ್ಮನ ಸನ್ನಿಧಿಯನ್ನು ಸೇರುತ್ತಿರಬೇಕು. ಮನಸ್ಸಿನ ಚಾಂಚಲ್ಯವನ್ನು ತಡೆಗಟ್ಟಬೇಕಾದರೆ ಮನಸ್ಸು ಏತಕ್ಕೆ ಚಲಿಸುತ್ತಿದೆ ಎಂಬುದನ್ನು ಕಂಡುಹಿಡಿದು ಆ ಕಾರಣವನ್ನು ನಿರ್ಮೂಲ ಮಾಡಬೇಕಾಗಿದೆ. ಮನಸ್ಸು ಹಾಗೆ ಪ್ರಪಂಚದ ಕಡೆ ಓಡಿಹೋಗುವುದಕ್ಕೆ ಕಾರಣವೇ ಅದರಮೇಲೆ ನಮಗೆ ಇರುವ ಆಸಕ್ತಿ. ಅದನ್ನು ಹಾಗೆ ಹೋಗದಂತೆ ಮಾಡಬೇಕಾದರೆ ಅದಕ್ಕೆ ವಿರೋಧವಾದ ಭಾವವನ್ನು ಮನಸ್ಸಿನಲ್ಲಿ ಎಬ್ಬಿಸಬೇಕು. ಮುಂಚೆ ಚಾರಿತ್ರ ಶುದ್ಧಿಯಾಗಬೇಕು. ಅನಂತರ ಧ್ಯಾನಮಾಡಿದರೆ ಮಾತ್ರ ಫಲಕಾರಿಯಾಗುವುದು ಯಾವಾಗ ಚಾರಿತ್ರವೇ ಶುದ್ಧವಾಗಿಲ್ಲವೊ, ಪ್ರಪಂಚವನ್ನು ಅನುಭವಿಸಬೇಕೆಂಬ ಆಸೆಯ ಗುಳ್ಳೆಗಳು ಏಳುತ್ತಿರುವುವೊ ಅಂತಹವನು ಕಣ್ಣನ್ನು ಮುಚ್ಚಿಕೊಂಡರೂ ಅವನ ಮನಸ್ಸು ಒಂದು ಕಡೆ ಇರುವುದಿಲ್ಲ. ಆದಕಾರಣವೆ ಧ್ಯಾನಕ್ಕೆ ಅಸ್ತಿಭಾರ ಒಳ್ಳೆಯ ಗುಣ, ಸಮತ್ವಬುದ್ಧಿ. ಅದನ್ನೇ ಶ್ರೀಕೃಷ್ಣ ಈ ಶ್ಲೋಕದಲ್ಲಿ ಹೇಳುವನು: "ಶೀತೋಷ್ಣ ಸುಖದುಃಖಗಳಲ್ಲಿ, ಮಾನಾಪಮಾನಗಳಲ್ಲಿ ಜಯಿಸಲ್ಪಟ್ಟ ಮನಸ್ಸುಳ್ಳವನೂ ಪ್ರಶಾಂತನೂ ಆದವನ ಆತ್ಮ ವಿಶೇಷವಾಗಿ ಸಮಾಹಿತವಾಗಿರು

ವನು. ಜ್ಞಾನ ಮತ್ತು ವಿಜ್ಞಾನ ಇವುಗಳಿಂದ ತೃಪ್ತಿ ಹೊಂದಿದ ಮನಸ್ಸುಳ್ಳವನು, ಕೂಟಸ್ಥನು, ಜಿತೇಂದ್ರಿಯನು, ಮಣ್ಣು ಕಲ್ಲು ಚಿನ್ನ ಇವುಗಳನ್ನು ಸಮನಾಗಿ ನೋಡುವವನು ಆದ ಯೋಗಿಯೂ ಯುಕ್ತನೆಂದು ಹೇಳಲ್ಪಡುತ್ತಾನೆ. ಸುಹೃತ್ ಮಿತ್ರ ಅರಿ ಉದಾಸೀನ ಮಧ್ಯಸ್ಥ ದ್ವೇಷ ಬಂಧು ಇವರಲ್ಲಿಯೂ ಸಾಧುಗಳಲ್ಲಿಯೂ ಪಾಪಿಗಳಲ್ಲಿಯೂ ಸಮಬುದ್ಧಿಯುಳ್ಳವನು ಯೋಗಾರೂಢರಲ್ಲಿ ಶ್ರೇಷ್ಠ". ನಾವು ಒಂದು ಎತ್ತರವಾದ ಮನೆಯನ್ನು ಕಟ್ಟಬೇಕಾದರೆ ಬರೀ ಮೇಲೇರುವ ಅದರ ಗೋಪುರದ ಕಡೆಗೆ ಮನಸ್ಸನ್ನು ಕೊಟ್ಟರೆ ಸಾಲದು. ಅದಕ್ಕಿಂತ ಮುಂಚೆ ಆ ಭಾರವನ್ನೆಲ್ಲ ಹೊತ್ತಿರುವ ತಳಪಾಯದಮೇಲೆ ಗಮನ ಕೊಡಬೇಕು. ಆ ತಳಪಾಯವೇ ಶುದ್ಧ ಚಾರಿತ್ರ.

ಧ್ಯಾನ ಮಾಡುವುದಕ್ಕೆ ನಿರ್ಜನ ಪ್ರದೇಶ ಆವಶ್ಯಕ. ಇಲ್ಲದೇ ಇದ್ದರೆ ಬಾಹ್ಯಪ್ರಪಂಚದ ಗದ್ದಲ ಮತ್ತು ನೋಟಗಳು ಅವನ ಮನಸ್ಸನ್ನು ಪ್ರಪಂಚದ ಕಡೆಗೆ ಎಳೆಯುವುದು. ಅವನು ಏಕಾಕಿಯಾಗಿರಬೇಕು. ಧ್ಯಾನಜೀವನಕ್ಕೆ ಸಂಗಡಿಗರು ಆತಂಕವನ್ನು ತಂದೊಡ್ಡುವರು. ಯಾವುದಾದರು ಮಾತುಕತೆ ಪ್ರಾರಂಭವಾಗಿ ಕ್ರಮೇಣ ಮನಸ್ಸು ಪ್ರಪಂಚದ ಕಡೆ ಜಾರುವುದು. ಅವನು ತನ್ನ ಚಿತ್ತ ಮತ್ತು ಇಂದ್ರಿಯಗಳನ್ನು ನಿಗ್ರಹಿಸಿರಬೇಕು. ಆಶಾರಹಿತನಾಗಿರಬೇಕು. ಅಪರಿಗ್ರಹನಾಗಿರಬೇಕು. ಯಾವಾಗಲೂ ಎಂದರೆ ಧ್ಯಾನಮಾಡದೆ ಇರುವ ಕಾಲದಲ್ಲಿಯೂ ಮನಸ್ಸಿನ ಒಂದು ಭಾಗವನ್ನು ಭಗವಂತನ ಸ್ಮರಣ ಮನನದಲ್ಲಿ ಮೀಸಲಾಗಿಟ್ಟಿರಬೇಕು. ಅನಂತರ ಅವನು ಕುಳಿತುಕೊಳ್ಳುವ ಸ್ಥಳ ಶುಚಿಯಾಗಿರಬೇಕು. ಅಲ್ಲಿ ಯಾವ ಕೊಳೆಯೂ ಇರಕೂಡದು. ಶುಚಿಯೇ ಭಗವದ್ಭಕ್ತಿಗೆ ಎರಡನೆಯದು ಎಂಬ ನಾಣ್ಣುಡಿ ಇದೆ. ನಾವು ಕುಳಿತುಕೊಳ್ಳುವ ಜಾಗ ಸ್ಥಿರವಾಗಿರ

ಬೇಕು. ಅಲುಗಾಡಕೂಡದು. ಆಸನ ಅಲುಗಾಡಿದರೆ ಮನಸ್ಸು ಚಂಚಲವಾಗುವುದು. ಆಸನ ಅತಿಮೇಲೂ ಇರಕೂಡದು. ಅತಿಕೆಳಗೂ ಇರಕೂಡದು. ಮೇಲಿದ್ದರೆ ಎಲ್ಲಿ ಉರುಳಿ ಹೋಗುವೆನೋ ಎಂಬ ಭಯ. ಕೆಳಗೆ ಇದ್ದರೆ ಸುತ್ತಮುತ್ತಲೂ ಹರಿದಾಡುತ್ತಿರುವುದೆಲ್ಲ ತನ್ನೆಡೆಗೆ ಬರುವುದು ಎಂಬ ಕಳವಳವಿರುವುದು. ಕುಶದ ಮೇಲೆ ಚರ್ಮ ಚರ್ಮದ ಮೇಲೆ ಬಟ್ಟೆ ಹಾಕಿರಬೇಕು. ಎಂದರೆ ಕುಳಿತುಕೊಳ್ಳುವ ಸ್ಥಳ ಸ್ವಲ್ಪ ಮೆತ್ತಗೆ ಇರಬೇಕು. ಆಗಲೆ ದೀರ್ಘಕಾಲ ಒಂದೇ ಸ್ಥಳದಲ್ಲಿ ಕುಳಿತುಕೊಳ್ಳುವುದಕ್ಕೆ ಸಾಧ್ಯ.

ಶರೀರ ಶಿರಸ್ಸು ಮತ್ತು ಕತ್ತು ಇವುಗಳನ್ನು ಸಮನಾಗಿ ಅಚಲವಾಗಿ ಇರಿಸಿರಬೇಕು. ಮುಂದೆ ಅಥವಾ ತಲೆಬಾಗಿದರೆ ಅದು ಕ್ರಮೇಣ ನಿದ್ದೆಗೆ ಹೋಗುವುದು. ಯಾವ ಸ್ಥಿತಿಯಲ್ಲಿದ್ದರೆ ತಮಸ್ಸು ಮತ್ತು ರಜೋಗುಣಗಳಿಂದ ಪಾರಾಗಬಹುದೋ ಆ ಸ್ಥಿತಿಯಲ್ಲಿಡಬೇಕು. ಮೂಗಿನ ತುದಿಯನ್ನೇ ನೋಡುತ್ತ ದಿಕ್ಕುಗಳನ್ನು ನೋಡದೆ ಪ್ರಶಾಂತಾತ್ಮನೂ ನಿರ್ಭಯನೂ ಆಗಿ. ಬ್ರಹ್ಮಚಾರಿ ವ್ರತದಲ್ಲಿ ನಿರತನಾಗಿ. ಮನಸ್ಸನ್ನು ಸಂಯಮ ಮಾಡಿ ಪರಮಾತ್ಮನಲ್ಲಿಯೇ ಚಿತ್ತವುಳ್ಳವನಾಗಿ. ಅವನನ್ನೇ ಪರ ಎಂದು ಭಾವಿಸಿ ಯುಕ್ತನಾಗಿರಬೇಕು. ಹೀಗೆ ಪರಮಾತ್ಮನನ್ನು ಆಶ್ರಯಿಸಿದವನು ಮೋಕ್ಷದಲ್ಲಿ ಕೊನೆಗಾಣುವ ಶಾಂತಿಯನ್ನು ಹೊಂದುತ್ತಾನೆ ಎನ್ನುವನು ಶ್ರೀಕೃಷ್ಣ.

ಯೋಗಿಯ ಜೀವನ "ಮಿತಿಮೀರಿ ತಿನ್ನುವವನಿಗೂ ಅಲ್ಲ. ತಿನ್ನದೆ ಇರುವವನಿಗೂ ಅಲ್ಲ. ಆಹಾರ ವಿಹಾರದಲ್ಲಿ ಮಿತವಾಗಿರಬೇಕು. ಕರ್ಮದಲ್ಲಿ ಮಿತವಾಗಿರಬೇಕು. ನಿದ್ರೆ ಎಚ್ಚರಗಳಲ್ಲಿ ಮಿತವಾಗಿರಬೇಕು. ಆಗ ಯೋಗ ದುಃಖನಾಶಕವಾಗುವುದು".

ಮಿತಿಮೀರಿ ತಿಂದರೆ ಸೋಮಾರಿಯಾಗುವೆವು. ನಮ್ಮ ಶಕ್ತಿಯೆಲ್ಲ ತಿಂದುದನ್ನು ಅರಗಿಸಿಕೊಳ್ಳುವುದಕ್ಕೇ ಹೋಗುವುದು. ಒಂದು ತುತ್ತು ಅನ್ನ ಹೆಚ್ಚು ತಿಂದು ಬಂದರೆ ಕ್ಲಾಸಿನಲ್ಲಿ ಕುಳಿತುಕೊಂಡು ತೂಕಡಿಸಬೇಕಾಗುವುದು. ಹೀಗಿರುವಾಗ ಅವನು ಅಂತಹ ಮನಸ್ಸಿನಿಂದ ಧ್ಯಾನವನ್ನಾದರೂ ಹೇಗೆ ಮಾಡ ಬಹುದು. ಅದರಂತೆಯೇ ಏನೂ ತಿನ್ನದೆ ಉಪವಾಸ ಮಾಡು ವುದು. ದೇಹ ತನ್ನ ಕೆಲಸವನ್ನು ಮಾಡುವುದಕ್ಕೆ ತಕ್ಕ ಶಕ್ತಿಯನ್ನು ಕೊಡುವ ಆಹಾರವನ್ನು ಮಿತವಾಗಿ ಕೊಡಬೇಕು. ಅದನ್ನು ಕಡಿಮೆ ಮಾಡಿದರೆ ದೇಹ ದುರ್ಬಲವಾಗುವುದು. ಹಲವು ರೋಗರುಜಿನಗಳಿಗೆ ತುತ್ತಾಗುವುದು. ಇಂತಹ ದೇಹದಿಂದ ನಾವು ಯಾವ ಧ್ಯಾನವನ್ನೂ ಮಾಡಲಾರೆವು. ಬರೀ ನೀರೆ ಕುಡಿಯುತ್ತಿದ್ದರು. ತರಗೆಲೆ ತಿನ್ನುತ್ತಿದ್ದರು, ಉಸಿರಾಡಿಯೇ ಬದುಕಿರುತ್ತಿದ್ದರು ಹಿಂದಿನ ಋಷಿಗಳು ಎಂದು ಹೇಳಬಹುದು. ಬಹುಶಃ ದೇಹಭಾವನೆಯನ್ನು ಮೀರಿಹೋದ ಮಹಾಮಹಿಮ ರಾದ ಕೆಲವು ವ್ಯಕ್ತಿಗಳಿಗೆ ಇದು ಸಾಧ್ಯವಿರಬಹುದು. ನಾವು ಅದೇ ಗುಂಪಿಗೆ ಸೇರಿದವರೆಂದು ಭ್ರಮಿಸಿದರೆ ಶಿವ ವಿಷವನ್ನು ಕುಡಿದ ಎಂದು ನಾವೂ ಕುಡಿದಂತೆ ಆಗುವುದು!

ಇದರಂತೆಯೇ ನಮ್ಮ ವಿಹಾರ ಕರ್ಮ ಮುಂತಾದುವುಗಳು ಒಂದು ಮಿತಿಯಲ್ಲಿರಬೇಕು. ಹೆಚ್ಚು ಮಾತನಾಡಕೂಡದು, ಅದರಂತೆಯೇ ಮಾತನ್ನೇ ಆಡದೆ ಇರುವುದನ್ನು ತೊರೆಯಬೇಕು. ಹೆಚ್ಚು ಕರ್ಮ ಮಾಡಕೂಡದು, ಹಾಗೆಯೇ ಏನೂ ಕರ್ಮ ವನ್ನು ಮಾಡದೆ ಶುದ್ಧ ಸೋಮಾರಿಯೂ ಆಗಿರಬಾರದು. ...

ದೇಹ ಮತ್ತು ಮನಸ್ಸು ಎಂಬುದು ಒಂದು ವೀಣೆಯಂತೆ. ತಂತಿ ಬಹಳ ಸಡಿಲವಾಗಿದ್ದರೆ ಯಾವ ಸ್ವರವೂ ಬರುವುದಿಲ್ಲ. ಅದು ಬಹಳ ಗಟ್ಟಿಯಾದ್ದರೆ ಕಿತ್ತುಹೋಗುವುದು. ಮಧ್ಯೆ

ಮಾರ್ಗಾವಲಂಬಿಗಳಾಗಿರಬೇಕು ಎಂಬುದನ್ನು ಶ್ರೀಕೃಷ್ಣ ವಿವರಿಸು ವನು.

ಈ ಸಮಯದಲ್ಲಿ ಅರ್ಜುನ ನಮ್ಮ ಪರವಾಗಿಯೋ ಎಂಬಂತೆ ಕೆಲವು ಪ್ರಶ್ನೆಗಳನ್ನು ಹಾಕುತ್ತಾನೆ: "ಮನಸ್ಸು ಚಂಚಲ ವಾದದ್ದು, ಕ್ಷೋಭೆಯನ್ನುಂಟುಮಾಡುವ ಸ್ವಭಾವವುಳ್ಳದ್ದು. ಬಲ ವುಳ್ಳದ್ದು ಮತ್ತು ದೃಢವಾದದ್ದು. ಅದರ ನಿಗ್ರಹ ವಾಯುವಿನಂತೆ ಅತ್ಯಂತ ಕಷ್ಟವೆಂದು ನಾನು ತಿಳಿಯುತ್ತೇನೆ".

ಈ ಅನುಭವ ನಮ್ಮಲ್ಲಿ ಎಲ್ಲರಿಗೂ ಬರುವುದು. ಸಾಧಾರಣ ವಾಗಿ ನಮ್ಮ ಮನಸ್ಸಿನ ಸ್ವಭಾವ ಚಂಚಲವಾಗಿರುವುದು. ಆದರೆ ಅದು ಯಾವಾಗ ದೇವರ ಕಡೆಗೆ ತಿರುಗಬೇಕೆಂದು ಬಯಸು ವುದೋ, ಆಗ ಪ್ರಾರಂಭದಲ್ಲಿ ಎಂದಿಗಿಂತ ಹೆಚ್ಚು ಚಂಚಲ ವಾಗುವುದು. ಬೇರೆ ಸಮಯದಲ್ಲಿ ಬರದ ಆಲೋಚನೆಗಳೆಲ್ಲ ಧ್ಯಾನದ ಸಮಯದಲ್ಲಿ ನಮ್ಮ ಮೇಲೆ ಧಾಳಿ ಇಡಲು ಪ್ರಯತ್ನಿಸು ತ್ತವೆ. ಆಗ ಅನೇಕವೇಳೆ ಅನ್ನಿಸುವುದು ಇದಕ್ಕಿಂತ ನಮ್ಮ ಮನಸ್ಸು ಮುಂಚೆಯೇ ಸ್ವಲ್ಪ ತಿಳಿಯಾಗಿತ್ತಲ್ಲ ಎಂದು. ಆದರೆ ನಾವು ಇದಕ್ಕೆ ಕುಗ್ಗಿ ಹೋಗಕೂಡದು. ಒಂದು ಮನೆಯಲ್ಲಿ ಕಸವನ್ನು ಗುಡಿಸುವುದಕ್ಕೆ ಪ್ರಾರಂಭವಾದಾಗ ನೆಲದ ಮೇಲಿರುವ ಧೂಳೆಲ್ಲ ಮೇಲಕ್ಕೆ ಏಳುವಂತೆ ಇದು. ಆಗ ನಮಗೆ ಕಸವನ್ನು ಗುಡಿಸದೇ ಇದ್ದರೆ ಚೆನ್ನಾಗಿರುತ್ತಿತ್ತಲ್ಲ ಎಂದು ಭಾವಿಸುವೆವು. ಆದರೆ ಸ್ವಲ್ಪ ಕಾಲದ ಮೇಲೆ ಅದೆಲ್ಲ ಹೊರಟುಹೋಗುವುದು. ಎಂದೆಂದಿಗೂ ಹಾಗೆಯೇ ಇರುವುದಿಲ್ಲ. ನಾವು ಆ ಸಮಯ ದಲ್ಲಿ ನೆಚ್ಚುಗೆಡಕೂಡದು. ಅಭ್ಯಾಸ ಮತ್ತು ವೈರಾಗ್ಯದಿಂದ ನಾವು ಪ್ರಯತ್ನಮಾಡುತ್ತಾ ಹೋಗಬೇಕು.

ಅರ್ಜುನ ಮತ್ತೊಂದು ಪ್ರಶ್ನೆಯನ್ನು ಕೇಳುತ್ತಾನೆ: "ಶ್ರದ್ಧಾ ಯುಕ್ತನಾಗಿದ್ದರೂ ಪ್ರಯತ್ನವನ್ನು ಮಾಡದೆ ಇರುವವನು.

ಯೋಗದಿಂದ ಚಲಿಸಲ್ಪಟ್ಟ ಮನಸ್ಸುಳ್ಳವನೂ ಆದ ಪುರುಷನು ಯೋಗಸಿದ್ಧಿಯನ್ನು ಪಡೆಯದೆ ಯಾವ ಗತಿಯನ್ನು ಹೊಂದು ತ್ತಾನೆ. ಬ್ರಹ್ಮಪ್ರಾಪ್ತಿಯ ಮಾರ್ಗದಲ್ಲಿ ಮುಗ್ಧನೂ ಉಭಯ ಭ್ರಷ್ಟನೂ ಆಶ್ರಯವಿಲ್ಲದವನೂ ತುಂಡಾದ ಮೇಘದಂತೆ ನಾಶ ವಾಗುವುದಿಲ್ಲವೆ? ಈ ನನ್ನ ಸಂಶಯವನ್ನು ಹೋಗಲಾಡಿಸು ವುದಕ್ಕೆ ನೀನು ಅರ್ಹನು. ನಿನ್ನನ್ನು ಬಿಟ್ಟರೆ ಈ ಸಂಶಯವನ್ನು ಹೋಗಲಾಡಿಸುವವರು ಬೇರೆ ಯಾರೂ ಇಲ್ಲ".

ಇಲ್ಲಿ ಅರ್ಜುನ ಕೇಳುವ ಪ್ರಶ್ನೆ ನಮ್ಮಲ್ಲಿ ಏಳುವ ಭಾವನೆಯ ಮರುಧ್ವನಿಯಂತೆ ಇದೆ. ದೇವರ ಕಡೆ ಹೋಗಬೇಕೆಂದು ಇಹ ಸೌಖ್ಯಗಳನ್ನು ಬಿಟ್ಟು ಸಾಧನೆ ಮಾಡುತ್ತಿರುವೆವು. ಆದರೆ ಹೋರಾಟದಲ್ಲಿರುವಾಗಲೇ ಮೃತ್ಯು ಬರುವುದು. ಅವನ ಗತಿ ಏನಾಗುವುದು. ತ್ರಿಶಂಕುವಿನ ಸ್ಥಿತಿಯಾಗುವುದಿಲ್ಲವೆ. ಇಹವನ್ನು ಬಿಟ್ಟದ್ದಾಯಿತು. ಪರ ಸಿಕ್ಕಲಿಲ್ಲ. ಆಗ ನಾವು ಪ್ರಯತ್ನಮಾಡಿ ಪ್ರಯೋಜನವೇನಾಯಿತು ಎಂದು ಕೇಳುವೆವು. ಆಗಲೇ ಶ್ರೀ ಕೃಷ್ಣ ನಮಗೆಲ್ಲ ಭರವಸೆಯನ್ನು ಕೊಡುವ ಈ ಉತ್ತರವನ್ನು ಕೊಡುವನು. "ಎಲೈ ಅರ್ಜುನ. ಯೋಗಭ್ರಷ್ಟನಿಗೆ ಈ ಲೋಕದಲ್ಲಿ ನಾಶವಿಲ್ಲ, ಪರಲೋಕದಲ್ಲಿಯೂ ನಾಶವಿಲ್ಲ. ಕಲ್ಯಾಣಕಾರ್ಯಗಳನ್ನು ಮಾಡುವ ಯಾವನೂ ದುರ್ಗತಿಯನ್ನು ಹೊಂದುವುದಿಲ್ಲ. ಯೋಗಭ್ರಷ್ಟನು ಪುಣ್ಯಶಾಲಿಗಳ ಲೋಕ ವನ್ನು ಹೊಂದಿ. ಅಲ್ಲಿ ಅನೇಕ ವರ್ಷಗಳವರೆಗೂ ವಾಸವಾಗಿದ್ದು. ಅನಂತರ ಸದಾಚಾರಶೀಲರೂ ಶ್ರೀಮಂತರೂ ಆಗಿರುವವರ ಮನೆಯಲ್ಲಿ ಹುಟ್ಟುವನು. ಅಥವಾ ಧೀಮಂತರಾದ ಯೋಗಿಗಳ ಕುಲದಲ್ಲಿ ಅವನು ಹುಟ್ಟುವನು. ಇಂತಹ ಜನ್ಮ ಲೋಕದಲ್ಲಿ ದುರ್ಲಭತರವಾದದ್ದು. ಅಲ್ಲಿ ಪೂರ್ವಜನ್ಮಗಳ ಸಂಬಂಧವಾದ ಬುದ್ಧಿ ಸಂಯೋಗವನ್ನು ಹೊಂದಿ ಸಂಸಿದ್ಧಿಗಾಗಿ ಪ್ರಯತ್ನ

ಪಡುವನು. ಪೂರ್ವಾಭ್ಯಾಸದಿಂದ ಅಸ್ವತಂತ್ರನಾಗಿ ಅವನು ಎಳೆಯಲ್ಪಡುತ್ತಾನೆ...ಪ್ರಯತ್ನದಿಂದ ಅಭ್ಯಾಸಮಾಡುತ್ತಿರುವವನೂ ಕಿಲ್ಬಿಷರಹಿತನೂ ಅನೇಕ ಜನ್ಮಗಳಿಂದ ಸಿದ್ಧಿಯನ್ನು ಪೊಂದಿದವನೂ ಆದ ಯೋಗಿ ಅನಂತರ ಪರಮಗತಿಯನ್ನು ಹೊಂದುತ್ತಾನೆ".

ಆಧ್ಯಾತ್ಮಿಕ ಜೀವನ ಒಂದು ಮಹಾ ಸಾಹಸ ಯಾತ್ರೆ. ಇದು ಮನಸ್ಸಿನ ಗೌರೀಶಂಕರ ಶಿಖರವನ್ನು ಏರುವ ಸಾಹಸ. ಇದು ಕೆಲವು ವರುಷಗಳಲ್ಲಿ ಅಥವಾ ಒಂದು ಜನ್ಮದಲ್ಲಿ ಮುಗಿಯುವ ಸಾಹಸವಲ್ಲ. ಇದಕ್ಕಾಗಿ ಜನ್ಮ ಜನ್ಮಗಳನ್ನು ಮುಡುಪಾಗಿಡಬೇಕು. ನಾವು ಹಿಂದೆ ಪ್ರಪಂಚವನ್ನು ಅನುಭವಿಸುವುದಕ್ಕೆ, ಮರೀಚಿಕಾಮಯವಾದ ಸುಖವನ್ನು ಅಟ್ಟಿಕೊಂಡು ಹೋಗುವುದರಲ್ಲಿ ಲೆಕ್ಕವಿಲ್ಲದಷ್ಟು ಜನ್ಮಗಳನ್ನೇ ಕಳೆದಿರುವೆವು. ಅಲ್ಲಿ ನಾವು ಚೌಕಾಶಿಯನ್ನು ಮಾಡುವುದಿಲ್ಲ. ಅದರಿಂದ ಬೇಕಾದಷ್ಟು ಹೀನ ಸಂಸ್ಕಾರಗಳ ಉಗ್ರಾಣವೇ ಈ ಜನ್ಮದಲ್ಲಿ ನಮ್ಮ ಮನಸ್ಸಿನಲ್ಲಿಟ್ಟುಕೊಂಡಿರುವೆವು. ಆದರೆ ಒಳ್ಳೆಯ ಜೀವನಕ್ಕೆ ಕೈಹಾಕಿದ ತಕ್ಷಣವೇ ಅದು ಸಿದ್ಧಿಸಬೇಕು. ಸಿದ್ಧಿಸದೇ ಇದ್ದರೆ ಏನು ಪ್ರಯೋಜನ ಎಂದು ಕೇಳುವೆವು. ಅದು ಪೂರ್ತಿ ನಮಗೆ ಸಿದ್ಧಿಸದೇ ಇರಬಹುದು. ಅದಕ್ಕಾಗಿ ನಾವು ಹೋರಾಡುವ ಕೆಲವು ಉತ್ತಮ ಸಂಸ್ಕಾರಗಳನ್ನಾದರೂ ಸಂಗ್ರಹಿಸುವೆವು. ಈ ಸಂಗ್ರಹ ಬರುಬರುತ್ತಾ ವಿಸ್ತಾರವಾದಂತೆಲ್ಲ ನಾವು ದೇವರೆಡೆಗೆ ಹೆಚ್ಚು ಹೋಗಲು ಸಾಧ್ಯವಾಗುವುದು.

ಇಲ್ಲಿ ನಷ್ಟವೆಂಬುದಿಲ್ಲ. ನಾವು ಒಬ್ಬ ನರಮಾನವನ ಹತ್ತಿರ ಊಳಿಗಮಾಡಿದರೆ ಅವನು ಎಷ್ಟೇ ಜಿಪುಣನಾದರೂ ನಮಗೆ ಏನನ್ನಾದರೂ ಕೊಡದೆ ಕಳುಹಿಸುವುದಿಲ್ಲ. ದೇವರು ದಯಾಮಯ. ಅವನ ಹೆಸರಿನಲ್ಲಿ ನಾವು ಸಾಧನೆಮಾಡಲು ಪ್ರಯತ್ನಿ

ಬವರೆ. ನಾವು ಗುರಿಯನ್ನು ಮುಟ್ಟದೇ ಇರಬಹುದು, ಆದರೆ ಗುರಿಯ ಸಮೀಪಕ್ಕೆ ಹೋಗುವೆವು. ಅಷ್ಟನ್ನಾದರೂ ಅವನು ಅನುಗ್ರಹಿಸುವುದರಲ್ಲಿ ಸಂದೇಹವಿಲ್ಲ.

ಎಲ್ಲಿ ಭ್ರಷ್ಟರಾಗುತ್ತೇವೆಯೋ ಎಂದು ನಾವೆಲ್ಲ ಅಂಜುತ್ತೇವೆ. ಪ್ರಪಂಚದಲ್ಲಿ ನಾವು ಯಾವುದನ್ನು ಅನುಸರಿಸಿಕೊಂಡು ಹೋದೆವೋ ಅದೆಲ್ಲ ನಮಗೆ ಸಿಕ್ಕಿರುವುದೇನು? ಅವುಗಳಿಂದ ನಾವು ಪೆಟ್ಟು ತಿಂದಿಲ್ಲವೆ? ಜೇನಿನಂತಿರುವ ವಿಷದ ಕೊಂಡಿಯಿಂದ ಕುಟುಕಿಸಿಕೊಂಡಿಲ್ಲವೆ? ಇಲ್ಲಿ ನಾವು ಭ್ರಷ್ಟರಾದರೆ ಅಂಜಿಕೆಯಿಲ್ಲ, ಅವಮಾನವಿಲ್ಲ! ಒದೆಸಿಕೊಳ್ಳುವ ವಸ್ತುವಿನ ಸಮೀಪಕ್ಕೆ ಮತ್ತೆ ಮತ್ತೆ ಹೋಗುವುದಕ್ಕೆ ಯಾವ ನಾಚಿಕೆಯೂ ಇಲ್ಲ. ದೇವರ ಹೆಸರಿನಲ್ಲಿ ಹೋಗಿ, ಅವನಿಗಾಗಿ ಹೋಗುವಾಗ ಭ್ರಷ್ಟನಾದೆ ಎಂದು ಹೇಳಿಕೊಳ್ಳೋಣ. ಇದರಲ್ಲಿ ನಾಚಬೇಕಾದುದಿಲ್ಲ. ನಾವು ಹಲವು ಸಲ ಭ್ರಷ್ಟರಾಗಿ ಅನಂತರ ಶ್ರೇಷ್ಠರಾಗ ಬೇಕಾಗಿದೆ. ಸ್ವಾಮಿ ವಿವೇಕಾನಂದರು ಒಂದು ಕಡೆ ಹೀಗೆ ಹೇಳುತ್ತಾರೆ: "ಮಹಾ ಆದರ್ಶಗಳಿಗೆ ಹೋರಾಡಿ ಸೋತ ಭ್ರಷ್ಟನ ಮಾರ್ಗದರ್ಶನವೂ ಮಂಗಳಕರ. ಅವನು ನಮಗೆ ಒಂದು ಆದರ್ಶವನ್ನು ನೆನಪಿಗೆ ತರುವನು". ಪ್ರಪಂಚದ ವಿಜಯಿಗಿಂತ ಯೋಗಭ್ರಷ್ಟ ಶತಪಾಲು ಮೇಲು. ಆದರೆ ದೇವರು ಅವನನ್ನು ಹಾಗೆಯೇ ಬಿಟ್ಟುಬಿಡುವುದಿಲ್ಲ. ಅವನನ್ನು ಮೇಲೆತ್ತಿ ಉದ್ಧರಿಸುತ್ತಾನೆ. ಅಂತಹವನು ಎಂದಿಗೂ ಅಧೋಗ ತಿಗೆ ಬರುವುದಿಲ್ಲ ಎಂಬ ಭರವಸೆಯನ್ನು ಕೊಡುತ್ತಾನೆ.

## ೭. ತತ್ತ್ವ ತ್ರಿವೇಣಿ

ಹಿಂದೂಗಳಲ್ಲಿ ಮೂರು ಮುಖ್ಯ ತತ್ತ್ವದೃಷ್ಟಿಗಳಿವೆ. ಅವೇ ದ್ವೈತ, ವಿಶಿಷ್ಟಾದ್ವೈತ ಮತ್ತು ಅದ್ವೈತ ಎಂಬುವು. ದ್ವೈತವೆಂದರೆ ಜೀವ, ಜಗತ್. ಈಶ್ವರ ಬೇರೆ ಬೇರೆ ಇರುವರು ಎಂದು ಒಪ್ಪಿಕೊಳ್ಳುವುದು. ಅವುಗಳಲ್ಲಿ ಎಂದಿಗೂ ಒಂದು ಮತ್ತೊಂದು ಆಗುವುದಿಲ್ಲ. ವಿಶಿಷ್ಟಾದ್ವೈತವೆಂದರೆ ಇರುವುದು ಒಂದೇ ಆದರೂ, ಅವನಲ್ಲಿ ಯಾವುದೊ ಒಂದು ಸಣ್ಣ ಅಂಶದಿಂದ ಈ ಜೀವ ಜಗತ್ ಎಲ್ಲಾ ಆಗಿದೆ ಎಂದು ಹೇಳುವರು. ಅವನು ಪೂರ್ಣ. ಜೀವಿಗಳೆಲ್ಲ ಅಂಶಗಳು. ಸಾಗರ ಮತ್ತು ಅಲೆಯಂತೆ ಅವನೇ ಪ್ರತಿಯೊಬ್ಬ ಜೀವರಿಗೂ ಜೀವಾಳವಾಗಿ ಇರುವನು. ಅದ್ವೈತ ಎಂದರೆ ಇರುವುದು ಒಂದೇ. ಅದೇ ಹಲವದರಂತೆ ಕಾಣುತ್ತಿದೆ. ಈ ಜೀವದ ನಿಜವಾದ ಸ್ವಭಾವವೇ ಬ್ರಹ್ಮ. ಈಗ ಅಜ್ಞಾನದಲ್ಲಿರುವುದರಿಂದ ತಾನು ಬೇರೆ ಎಂದು ಭಾವಿಸುವನು. ಜ್ಞಾನ ಬಂದಮೇಲೆ ತಾನು ಯಾವಾಗಲೂ ಅದೇ ಆಗಿದ್ದೆನು ಎಂಬುದು ಗೊತ್ತಾಗುವುದು. ರಾಜನ ಮಗ ಕಾಡಿನಲ್ಲಿ ಅಲೆಯುತ್ತಿದ್ದಾಗ ತಾನು ಅದನ್ನು ಮರೆತು ಭಿಕಾರಿಯಂತೆ ಭಿಕ್ಷೆ ಬೇಡುತ್ತಿರುವನು. ಯಾರೋ ಅವನನ್ನು ಜ್ಞಾಪಿಸಿದ ಮೇಲೆ ತನಗೆ ಅದು ಗೊತ್ತಾಗಿ ಭಿಕ್ಷೆ ಬೇಡುವುದನ್ನು ಬಿಡುವನು.

ಮೇಲಿನ ಮೂರು ತತ್ತ್ವಗಳನ್ನು ಮಧ್ವಾಚಾರ್ಯರು, ರಾಮಾನುಜಾಚಾರ್ಯರು ಮತ್ತು ಶಂಕರಾಚಾರ್ಯರು ಪ್ರಚಾರ ಮಾಡಿರುವರು. ತಾವು ಮಾಡುವ ಪ್ರಚಾರ ಅಗಲೆ ಬ್ರಹ್ಮಸೂತ್ರ ಉಪನಿಷತ್ತು ಮತ್ತು ಭಗವದ್ಗೀತೆಯಲ್ಲಿ ಇದೆ ಎಂಬುದನ್ನು ತೋರಿಸುವುದಕ್ಕೆ ಆಯಾ ದೃಷ್ಟಿಯಿಂದ ಆಯಾ ಗ್ರಂಥಗಳಿಗೆ ಭಾಷ್ಯವನ್ನು ಬರೆದಿರುವರು. ಮೂರು ಜನ ಆಚಾರ್ಯರೂ

ಗೀತೆಯಲ್ಲಿ ದ್ವೈತವೇ ಇರುವುದೆಂದೂ, ವಿಶಿಷ್ಟಾದ್ವೈತವೇ ಇರುವುದರಿಂದ ಅದ್ವೈತವೇ ಇರುವುದೆಂದೂ ಪ್ರತಿಪಾದಿಸುವರು. ಅವರ ಅನುಯಾಯಿಗಳಂತೂ ಅವರು ಹೇಳುವುದನ್ನೇ ಚಾರು ಚೂರು ತಪ್ಪದೆ ಇರುವಂತೆ ನೋಡಿಕೊಳ್ಳುವರು. ಪರಸ್ಪರ ವಿರೋಧವಾಗಿರುವ ತತ್ತ್ವಗಳೆಲ್ಲ ಹೇಗೆ ಒಂದೇ ಶಾಸ್ತ್ರದಲ್ಲಿ ಇರಲು ಸಾಧ್ಯ? ಇವರಲ್ಲಿ ಯಾವುದೋ ಒಂದು ನಿಜವಿರಬೇಕು, ಉಳಿದವು ತಪ್ಪಿರಬೇಕು ಎಂದು ಊಹಿಸುವುದು ರೂಢಿ. ಆದರೆ ಗೀತೆಯಲ್ಲಿ ಯಾವುದೋ ಒಂದು ತತ್ತ್ವವನ್ನು ಹೇಳುವುದಕ್ಕೆ ಶ್ರೀಕೃಷ್ಣ ಹೊರಟಿಲ್ಲ. ಅಲ್ಲಿ ಹಲವು ತತ್ತ್ವಗಳಿವೆ. ಯಾರು ತಮಗೆ ಯಾವುದು ಬೇಕೊ ಅದನ್ನು ಆರಿಸಿಕೊಳ್ಳಬಹುದು. ಒಂದು ನಿಜವಾದರೆ ಉಳಿದವು ಸುಳ್ಳಾಗಿರಬೇಕೆಂದಲ್ಲ. ಒಂದೇ ಸತ್ಯವನ್ನು ನೋಡುವಾಗ ನಮ್ಮ ದೃಷ್ಟಿಬೇಧಕ್ಕೆ ತಕ್ಕಂತೆ ಅದು ಕಾಣುವುದು.

ಒಂದು ನದಿ ದೂರದ ಬೆಟ್ಟದಲ್ಲಿ ಹುಟ್ಟಿ ಒಂದು ಹೆಸರಿನಿಂದ ಹರಿದುಹೋಗುತ್ತಿದೆ. ಅದು ತನ್ನ ಪಯಣವನ್ನೆಲ್ಲ ಪೂರೈಸಿ ಸಾಗರವನ್ನು ಸೇರುತ್ತಿದೆ. ಸ್ವಲ್ಪ ದೂರ ಹೋದಮೇಲೆ ಸಾಗರ ದಲ್ಲಿ ಒಂದಾಗಿದೆ. ಇಲ್ಲಿ ನದಿಯ ಒಂದು ಗತಿ ಮತ್ತೊಂದಕ್ಕೆ ಪೋಷಕವಾಗಿದೆಯೆ ಹೊರತು ಎಂದಿಗೂ ವಿರೋಧವಾಗಿಲ್ಲ. ನದಿ ಸಾಗರದಿಂದ ದೂರದಲ್ಲಿರುವಾಗ ಅದು ಬೇರೆ. ಅದಕ್ಕೆ ಬೇರೆ ಹೆಸರೇ ಇದೆ. ಅದು ಸ್ವತಂತ್ರವಾಗಿ ಹರಿದುಕೊಂಡು ಹೋಗುತ್ತಿದೆ. ಅದಕ್ಕೂ ಸಾಗರಕ್ಕೂ ಯಾವ ಸಂಬಂಧವೂ ಇನ್ನೂ ಆಗಿಲ್ಲ. ಆದರೆ ಅದೇ ನದಿ ಸಾಗರವನ್ನು ಸೇರುತ್ತಿರು ವಾಗ ಎರಡನ್ನೂ ನೋಡುತ್ತೇವೆ. ಒಂದರಲ್ಲಿ ಮತ್ತೊಂದು ಇರುವಂತೆ ನೋಡುತ್ತೇವೆ. ನದಿಯಲ್ಲಿ ಸಾಗರದ ನೀರಿದೆ. ಸಾಗರದಲ್ಲಿ ನದಿಯ ನೀರಿದೆ. ಆದರೆ ಕೆಲವು ಗಜಗಳು ಮುಂದೆ

ಹೋದರೆ ನದಿ ಮಾಯವಾಗಿ ಸಾಗರದಲ್ಲಿ ಸಂಪೂರ್ಣ ಒಂದಾಗಿದೆ. ನಾವು ಯಾವಾಗ ನದಿಯ ಯಾವುದೋ ಒಂದು ಅವಸ್ಥೆಯನ್ನು ಮಾತ್ರ ತೆಗೆದುಕೊಂಡು ಸತ್ಯವೆಂದರೆ ಅದು ಕೃತಕವಾಗುವುದು.

ಗೀತೆಯಲ್ಲಿ ದ್ವೈತ ಇದೆ, ವಿಶಿಷ್ಟಾದ್ವೈತ ಇದೆ, ಅದ್ವೈತ ಇದೆ. ಮತ್ತು ಇದುವರೆಗೆ ನಮಗೆ ಇನ್ನೂ ಹೊಳೆಯದ ಎಷ್ಟೋ ಸತ್ಯಗಳಿವೆ. ಗೀತೆ ಎಲ್ಲಾ ತತ್ತ್ವಗಳಿಗೂ ಉಗಮಸ್ಥಾನವಾಗಿದೆ. ಅದು ಒಂದನ್ನು ತಪ್ಪು ಮತ್ತೊಂದನ್ನು ಸರಿ ಎನ್ನುವ ಗೋಜಿಗೆ ಹೋಗದೆ, ಯಾರು ಯಾವ ಸಂಪ್ರದಾಯದಲ್ಲಿ ಹುಟ್ಟಿ ಬೆಳೆದಿರುವರೋ ಅವರಿಗೆ ಆಯಾ ತತ್ತ್ವಗಳಲ್ಲಿ ಶ್ರದ್ಧೆ ಇರುವುದು ಸಹಜ; ಅವರು ಅದನ್ನು ತಮ್ಮ ಜೀವನದಲ್ಲಿ ಅನುಷ್ಠಾನ ಮಾಡಲಿ; ಆದರೆ ಉಳಿದವರನ್ನು ದೂರದೆ ಇರಲಿ ಎಂಬುದನ್ನು ಗೀತೆಯಲ್ಲಿ ಕಲಿಯುವೆವು. ನಾವು ಅನೇಕ ವೇಳೆ ನಮ್ಮ ತತ್ತ್ವಕ್ಕೆ ಇತರ ತತ್ತ್ವಗಳನ್ನು ದೂರುವುದರಿಂದ ಗೌರವ ತೋರಿಸಲು ಯತ್ನಿಸುತ್ತೇವೆ. ಅದಲ್ಲ ನಿಜವಾಗಿ ಗೀತಾ ಬೋಧಿಸುವುದು. ನಮ್ಮದನ್ನು ನಾವು ಭಕ್ತಿಗೌರವಗಳಿಂದ ಅನುಷ್ಠಾನ ಮಾಡೋಣ. ಅದರಂತೆಯೇ ಇತರರಿಗೂ ಅವರವರ ತತ್ತ್ವಕ್ಕೆ ಹಾಗೆ ಮಾಡಲು ಅವಕಾಶ ಕೊಡೋಣ. ಸತ್ಯಕ್ಕೆ ಗೊತ್ತಿದೆ ಎಲ್ಲರೂ ತನ್ನನ್ನೇ ಕರೆಯುತ್ತಿರುವುದು, ತನ್ನ ಕಡೆಗೆ ವಿವಿಧ ಮಾರ್ಗಗಳಿಂದ ಬರುತ್ತಿರುವುದು ಎಂಬುದು. ಎಲ್ಲಾ ಧರ್ಮಗಳು ಮತ್ತು ತತ್ತ್ವಗಳು ಎಂಬ ಮಣಿಗಳ ಹಿಂದೆ ಅವುಗಳನ್ನು ಒಟ್ಟಿಗೆ ಸೇರಿಸಿರುವ ಸೂತ್ರವೇ ನಾನು ಎನ್ನುವನು ಶ್ರೀಕೃಷ್ಣ.

## ೮. ಅಧಿಕಾರ ವಿಚಾರ ಅನುಭವದ ಸಾಮರಸ್ಯ

ಶ್ರೀಕೃಷ್ಣ ಅರ್ಜುನನಿಗೆ ಅಧಿಕಾರವಾಣಿಯಿಂದ ಹೇಳುವನು. ಯಾವ ವಿಷಯಗಳನ್ನು ಅವನಿಗೆ ಹೇಳುತ್ತಿರುವನೊ ಅದರಲ್ಲಿ ಸಂಶಯಕ್ಕೆ ಆಸ್ಪದವೇ ಇಲ್ಲ. ನಾವು ಕೂಡ ಮುಂಚೆ ವಿಷಯಗಳನ್ನು ಅಧಿಕಾರಿಗಳಾದ ಪುರುಷರಿಂದ ಕೇಳಬೇಕು. ಅಂತಹ ಮಹಾತ್ಮರು ಬರೆದಿರುವ ವಿಷಯಗಳನ್ನು ಓದಬೇಕು. ಯಾರು ತಾತ್ತ್ವಿಕ ಜೀವನದಲ್ಲಿ ನಮಗಿಂತ ಮುಂದೆ ಹೋಗಿರುವರೊ ಅವರಿಂದ ವಿಷಯಗಳನ್ನು ತಿಳಿದುಕೊಳ್ಳಬೇಕು. ಅಂತಹ ಆಪ್ತ ವಾಕ್ಯ ದಾರಿಯಲ್ಲಿ ಮಿನುಗುತ್ತಿರುವ ದೀವಿಗೆಗಳಂತೆ. ಅವರು ನಮ್ಮನ್ನು ತಪ್ಪುದಾರಿಗೆ ಎಳೆಯುವುದಕ್ಕಲ್ಲ ಹೇಳುತ್ತಿರುವುದು, ನಮ್ಮ ಮೇಲಿನ ಅನುಕಂಪೆಯಿಂದ ಹೇಳುವರು; ನಮ್ಮ ಮೇಲಿನ ಪ್ರೀತಿಯಿಂದ ಅವರು ತಮ್ಮ ಅನುಭವಗಳನ್ನು ಬರೆದಿಟ್ಟು ಹೋಗಿರುವರು. ಅವರು ನಮ್ಮಂತಹ ಅಲ್ಪಾತ್ಮರಿಂದ ಏನನ್ನೂ ನಿರೀಕ್ಷಿಸುವುದಿಲ್ಲ. ಕತ್ತಲಿಂದ ಸ್ವಲ್ಪ ಬೆಳಕಿನ ಕಡೆ ಬರಲಿ ಎಂಬುದೇ ಅವರ ಉದ್ದೇಶ. ಒಬ್ಬ ಮುಕ್ತ ಬದ್ಧನಿಗೆ ಸಹಾಯಮಾಡಬೇಕು. ಅದಕ್ಕಾಗಿ ದೊಡ್ಡವರು ನಮಗೆ ಹೇಳುವರು, ಬರೆದಿಟ್ಟಿರುವರು. ನಾವು ಅದನ್ನು ಕೃತಜ್ಞತೆಯಿಂದ ಸ್ವೀಕರಿಸಬೇಕು, ಭಕ್ತಿಯಿಂದ ಸ್ವೀಕರಿಸಬೇಕು.

ಆದರೆ ಅದರ ವಿಚಾರವನ್ನೇ ಮಾಡಕೂಡದು ಎಂದು ಶ್ರೀಕೃಷ್ಣ ಹೇಳುವುದಿಲ್ಲ. ಯಾವುದನ್ನು ನಾವು ಓದುತ್ತೇವೆಯೋ ಕೇಳುತ್ತೇವೆಯೋ ಅದನ್ನು ವಿಚಾರಮಾಡಬೇಕು. ಅದನ್ನು ಚೆನ್ನಾಗಿ ತಿಳಿದುಕೊಳ್ಳುವುದಕ್ಕೆ ಪ್ರಯತ್ನ ಪಡಬೇಕು. ಒಂದು ವಸ್ತುವನ್ನು ತಿಳಿದುಕೊಳ್ಳಬೇಕಾದರೆ ಮನನ ಅತ್ಯಂತ ಆವಶ್ಯಕ. ಆಗಲೆ ಸಮಸ್ಯೆಯನ್ನು ಎಲ್ಲಾ ದೃಷ್ಟಿಯಿಂದಲೂ ನಾವು ನೋಡು

ವುದಕ್ಕೆ ಸಾಧ್ಯವಾಗುವುದು. ಅದನ್ನು ಸರಿಯೆ, ತಪ್ಪೆ ಎಂದು ವಿಮರ್ಶಿಸುವ ಶಕ್ತಿಯನ್ನು ನಾವು ವೃದ್ಧಿಮಾಡಿಕೊಳ್ಳಬೇಕು. ಎಂತಹ ಮಹಾನುಭಾವ ಹೇಳಲಿ, ಅವನ ಮೇಲೆ ನನಗೆ ಎಷ್ಟೇ ಗೌರವ ಇರಲಿ. ಅವನು ಹೇಳುವುದನ್ನು ಚೆನ್ನಾಗಿ ವಿಚಾರಮಾಡಿ ತೆಗೆದುಕೊಳ್ಳಬೇಕು. ಆಗಲೇ ಆ ಜ್ಞಾನ ನಮ್ಮದಾಗುವುದು. ನಮ್ಮ ಯುಕ್ತಿಗೆ ಸಮರ್ಪಕವಾಗಿಲ್ಲದೇ ಇದ್ದರೆ, ನಂಬಿದ ಜ್ಞಾನ ಪರೀಕ್ಷಾ ಸಮಯದಲ್ಲಿ ನಮ್ಮದಾಗುವುದಿಲ್ಲ. ಶ್ರೀಕೃಷ್ಣ ಜಗದ್ಗುರು, ಅನುಭವಗಳನ್ನೆಲ್ಲ ಅರ್ಜುನನಿಗೆ ಕೊಟ್ಟಾದಮೇಲೂ "ಈಗ ನಿನ್ನ ಮನಸ್ಸಿಗೆ ಹೇಗೆ ತೋರುವುದೊ ಹಾಗೆ ಮಾಡು" ಎನ್ನುವನೇ ಹೊರತು ನಂಬುವುದಕ್ಕೆ ಬಲಾತ್ಕಾರ ಮಾಡುವುದಿಲ್ಲ.

ಅನಂತರವೇ ಅನುಭವ. ವಿಚಾರದ ಮೂಲಕವಾಗಿ ನಾವು ಒಂದು ವಸ್ತು ಸಾಧ್ಯ ಎಂದು ತಿಳಿಯಬಹುದು. ಆದರೆ ಅದು ಇಲ್ಲೆ ನಿಲ್ಲಕೂಡದು. ಅದನ್ನು ನಮ್ಮ ಅನುಭವವನ್ನಾಗಿ ಮಾಡಿಕೊಳ್ಳಬೇಕು. ಇದನ್ನೇ ಶ್ರೀಕೃಷ್ಣ ಜ್ಞಾನ ಮತ್ತು ವಿಜ್ಞಾನವೆಂದು ಬೇರೆ ಬೇರೆ ಹೆಸರಿನಿಂದ ಕರೆಯುವುದು. ಜ್ಞಾನ ವೆಂದರೆ ಯುಕ್ತಿಯ ಆಧಾರದ ಮೇಲೆ ಇದು ನಿಜ ಎಂದು ತಿಳಿದುಕೊಳ್ಳುವುದು. ಆದರೆ ಆ ಅನುಭವ ಇವನಿಗೆ ಇನ್ನೂ ಬಂದಿಲ್ಲ. ಶ್ರೀರಾಮಕೃಷ್ಣರು ಇದನ್ನೇ ಹೀಗೆ ಹೇಳುತ್ತಿದ್ದರು: ಕೆಲವರು ಹಾಲನ್ನು ನೋಡಿರುವರು. ಕೆಲವರು ಹಾಲನ್ನು ಕುಡಿದಿರುವರು. ನೋಡಿರುವವರು ವಿಚಾರವಾದಿಗಳು. ಅವರಿಗೆ ಅದು ಏನು ಎಂಬುದು ಗೊತ್ತಿದೆ. ಅದನ್ನು ಕುಡಿದಿರುವವನು ವಿಜ್ಞಾನಿ, ಅದರಿಂದ ಪ್ರಯೋಜನ ಪಡೆದಿರುವರು. ಯುಕ್ತಿ ನಮ್ಮನ್ನು ಅನುಭವದ ಕಡೆಗೆ ಒಯ್ಯಬೇಕು. ಅನುಭವವೇ ಯುಕ್ತಿಯ ಗುರಿ. ಬರಿ ಯುಕ್ತಿಯೇ ಅಲ್ಲ.

ಶ್ರೀಕೃಷ್ಣ ಅರ್ಜುನನಿಗೆ ಅನುಭವವನ್ನು ಕೊಟ್ಟನು. ತನ್ನ

ನಿಜವಾದ ವಿಶ್ವರೂಪವನ್ನು ಅರ್ಜುನನಿಗೆ ತೋರಿಸಿದನು. ಆಗಲೇ ಅರ್ಜುನನು ಏನನ್ನು ತಿಳಿದುಕೊಂಡನೊ ಅದು ಊರ್ಜಿತ ವಾಗಿ ನಿಲ್ಲಲು ಸಾಧ್ಯವಾಯಿತು. ಇಲ್ಲಿ ಆಪ್ತವಾಕ್ಯ ಅಥವಾ ಅಧಿಕಾರವಾಣಿ, ಯುಕ್ತಿ ಮತ್ತು ಅನುಭವ ಒಂದಕ್ಕೆ ಮತ್ತೊಂದು ಪೋಷಕವಾಗಿದೆಯೇ ಹೊರತು, ಎಂದಿಗೂ ಒಂದು ಮತ್ತೊಂದನ್ನು ನಿರಾಕರಿಸುವುದಿಲ್ಲ ಒಂದರ ಹಿಂದೆ ಮತ್ತೊಂದು ಇರುವುದು. ಪರಮಸತ್ಯವೇನೆಂಬುದನ್ನು ಪ್ರತ್ಯಕ್ಷಮಾಡಿ ಕೊಂಡವನಿಗೆ ಅದು ಅನುಭವ. ಅದನ್ನು ಮತ್ತೊಬ್ಬರಿಗೆ ಹೇಳಿದಾಗ ಆ ಅನುಭವವೇ ಆಪ್ತವಾಕ್ಯವಾಗುವುದು. ಆ ಅನುಭವ ಹೇಗೆ ಸತ್ಯವೆಂಬುದನ್ನು ವಿವರಿಸಲು ಯತ್ನಿಸಿದಾಗಲೆ ಅದು ಯುಕ್ತಿಯಾಗುವುದು. ಶ್ರೀಕೃಷ್ಣನಲ್ಲಿ ಈ ಮೂರು ಸಂಧಿಸಿರುವುದನ್ನು ನೋಡುವೆವು.

## ೯. ಸ್ವಪ್ರಯತ್ನ ಮತ್ತು ಶರಣಾಗತಿ

ಸ್ವಪ್ರಯತ್ನ ಮತ್ತು ಶರಣಾಗತಿ ಗೀತೆಯಲ್ಲಿ ಸಂಧಿಸಿವೆ. ಅನೇಕ ವೇಳೆ ಸ್ವಪ್ರಯತ್ನವಿದ್ದರೆ ಶರಣಾಗತಿ ಹೇಗೆ ಸಾಧ್ಯ? ಶರಣಾಗತನಾದರೆ ಇನ್ನು ಅವನು ಸ್ವಪ್ರಯತ್ನವನ್ನೇನು ಮಾಡ ಬೇಕಾಗಿದೆ? ಇವೆರಡೂ ವಿರೋಧಾಭಾಸದಂತೆ ನಮಗೆ ಕಾಣು ವುವು. ಆದರೆ ಶ್ರೀಕೃಷ್ಣ ಅದ್ಭುತ ಮಂತ್ರವಾದಿ. ಇವೆರಡನ್ನೂ ಜೋಡಿಸುವನು. ಅವನು ಹೇಗೆ ಜೋಡಿಸುವನು ಎಂದರೆ ಒಂದೇ ನಾಣ್ಯದ ಎರಡು ಕಡೆಗಳು ಇವು ಎನ್ನುವಂತೆ ಜೋಡಿಸು ವನು. ಧ್ಯಾನಯೋಗದಲ್ಲಿ ಶ್ರೀಕೃಷ್ಣ "ಮನಸ್ಸಿನಿಂದಲೇ ತನ್ನನ್ನು ಸಂಸಾರಸಮುದ್ರದಿಂದ ಉದ್ಧಾರ ಮಾಡಿಕೊಳ್ಳಬೇಕು. ತನ್ನನ್ನು ಕುಗ್ಗಿಸಿಕೊಳ್ಳಬಾರದು. ಮನಸ್ಸೇ ತನ್ನ ಬಂಧು, ಮನಸ್ಸೇ ತನ್ನ ಶತ್ರು. ಯಾರು ಮನಸ್ಸನ್ನು ಜಯಿಸಿರುವರೋ, ಅವರಿಗೆ ಅದು ಅವನ ಮಿತ್ರ. ಯಾರು ಮನಸ್ಸಿಗೆ ಸೋತಿರುವರೊ, ಅವರಿಗೆ ಅದು ದೊಡ್ಡ ಶತ್ರು" ಎನ್ನುವನು.

ಇಲ್ಲಿ ಸ್ವಪ್ರಯತ್ನವನ್ನು ಯಾರಿಗೆ ಒತ್ತಿಹೇಳುತ್ತಿರುವನು ಎಂಬುದನ್ನು ಗಮನಿಸಬೇಕು. ಆ ಮನುಷ್ಯನಿಗೆ ಇನ್ನೂ ಒಂದು ಅಹಂಕಾರ ಎನ್ನುವುದು ಉಳಿದಿದೆ. ಅದನ್ನು ಸವೆಸಬೇಕಾಗಿದೆ. ಹಾಗೆ ಸವೆಸಬೇಕಾದರೆ ಅದು ಕೆಲಸಮಾಡಬೇಕು. ಸ್ವಪ್ರಯತ್ನದಲ್ಲಿ ನಿರತವಾಗಬೇಕು. ತಾನು ಸಾಧನೆ ಮಾಡಬೇಕು. ಯಾರೂ ತನ್ನನ್ನು ಮೇಲಕ್ಕೆ ಎತ್ತುತ್ತಾರೆ ಎಂದು ಕಾದು ಕುಳಿತಿದ್ದರೆ ಅವನು ಎಂದೆಂದಿಗೂ ಹಾಗೆಯೇ ಕುಳಿತಿರಬೇಕಾಗುವುದು. ಯಾರು ಸ್ವಪ್ರಯತ್ನ ಮಾಡುವರೋ ಅವರಿಗೆ ದೇವರು ಸಹಾಯ ಮಾಡುತ್ತಾನೆ. ಯಾರು ಸೋಮಾರಿಗಳಾಗಿರುವರೋ ಅವರು ಎಂದೆಂದಿಗೂ ಅಜ್ಞಾನದಲ್ಲಿಯೇ ಬಂಧನದಲ್ಲಿಯೇ ತೊಳಲಬೇಕಾಗುವುದು.

ಗೀತೆಯ ಬೋಧೆಯ ಕೊನೆಯಲ್ಲಿ ಶ್ರೀಕೃಷ್ಣ ಈ ಉಪದೇಶವನ್ನು ಬೋಧಿಸುವನು. "ಸರ್ವಧರ್ಮಗಳನ್ನು ಪರಿತ್ಯಾಗ ಮಾಡಿ, ನನ್ನೊಬ್ಬನನ್ನೇ ಶರಣುಹೊಂದು. ನಾನು ನಿನ್ನನ್ನು ಸರ್ವ ಪಾಪಗಳಿಂದಲೂ ಬಿಡಿಸುವೆನು. ಶೋಕಿಸಬೇಡ". ಇಲ್ಲಿ ಶರಣಾಗತಿಯ ಚರಮ ಸಂದೇಶವೇ ಇದೆ. ಒಬ್ಬ ಬೇಕಾದಷ್ಟು ಪ್ರಯತ್ನ ಮಾಡಿದಮೇಲೆ ತನ್ನ ಮಿತಿ ಅರಿವಾಗುವುದು. ತನಗೆ ಏನು ಮಾಡಲು ಸಾಧ್ಯ, ಎಷ್ಟು ಮಾಡಲು ಸಾಧ್ಯ ಎಂಬುದನ್ನು ಅರಿಯುವನು. ಅಹಂಕಾರ ಕುಗ್ಗಬೇಕಾದರೆ ಅದನ್ನು ದಣಿಸಬೇಕು. ಶ್ರೀರಾಮಕೃಷ್ಣರು ಒಂದು ಉಪಮಾನವನ್ನು ಕೊಡುತ್ತಿದ್ದರು. ಅದರಲ್ಲಿ ಸ್ವಪ್ರಯತ್ನ ಶರಣಾಗತಿ ಎರಡನ್ನೂ ಅಮೋಘವಾಗಿ ಜೋಡಿಸಿರುವರು. ಒಂದು ಹಡಗು ನಡು ಸಾಗರದಲ್ಲಿ ಹೋಗುತ್ತಿತ್ತು. ಅಲ್ಲಿಯ ಧ್ವಜಸ್ತಂಭದ ಮೇಲೆ ಒಂದು ಹಕ್ಕಿ ಕುಳಿತಿತ್ತು. ಅದಕ್ಕೆ ಕುಳಿತು ಬೇಜಾರಾಯಿತು. ತಾನೇ ಹಾರಿಕೊಂಡು ಬೇಗ ಗುರಿಯನ್ನು ಸೇರಬೇಕೆಂದು ನಾಲ್ಕು ದಿಕ್ಕುಗಳಿಗೂ ಹಾರಿ ಎಲ್ಲಿಯೂ ನೆಲವನ್ನು ಕಾಣದೆ ತಾನು ಕುಳಿತ

ಸ್ಥಳಕ್ಕೇ ಬಂದು ಕುಳಿತುಕೊಂಡಿತು. ಅಂತೂ ಹಡಗು ಹೋಗು ತ್ತಿದೆ. ಎಂದೋ ಒಂದು ದಿನ ತೀರವನ್ನು ಸೇರುವುದು. ಅನಂತರ ನಾನು ಹಾರಿಹೋಗುತ್ತೇನೆ ಎಂದು ಮನಸ್ಸು ಮಾಡಿಕೊಂಡಿತು. ಇದು ಹಾರಿ ರೆಕ್ಕೆಯನ್ನು ದಣಿಸುವುದಕ್ಕೆ ಮುಂಚೆ ಈ ಸಂಕಲ್ಪ ಅದಕ್ಕೆ ಬರಲಿಲ್ಲ. ಭಗವಂತನ ಕೈವಾಡವನ್ನು ನಾವು ನೋಡ ಬೇಕಾದರೆ ನಮ್ಮ ಅಹಂಕಾರ ತಗ್ಗಿರಬೇಕು. ಆಗಲೆ ಎಲ್ಲಾ ಅವನಿಂದ ಆಗುತ್ತಿದೆ, ಒಂದು ಹುಲ್ಲಿನ ಎಸಳು ಕೂಡ ಅವನ ಆಣತಿ ಇಲ್ಲದೆ ಚಲಿಸಲಾರದು ಎಂಬುದು ಗೊತ್ತಾಗಬೇಕಾದರೆ. ಅಹಂಕಾರಹೋಗುವುದಕ್ಕೆ ಮುಂಚೆ ನಾವು ಈ ಮಾತನ್ನು ಕೇಳಿರಬಹುದು. ಆದರೆ ಅದೆಂದಿಗೂ ನಮ್ಮ ಅನುಭವಕ್ಕೆ ಬಂದಿರುವುದಿಲ್ಲ.

## ೧೦. ಮುಕ್ತಾಯ

ಶ್ರೀಕೃಷ್ಣ ಗೀತೆಯಲ್ಲಿ ಮುಕ್ತಿಯ ಬಾಗಿಲನ್ನು ಎಲ್ಲರಿಗೂ ತೆರೆಯುವನು:

"ಅತ್ಯಂತ ದುರಾಚಾರಿಯಾಗಿದ್ದರೂ ಅನನ್ಯಭಕ್ತಿಯಿಂದ ನನ್ನನ್ನು ಭಜಿಸಿದರೆ ಅವನು ಸಾಧುವೆಂದೇ ತಿಳಿಯತಕ್ಕದ್ದು. ಏಕೆಂದರೆ ಅವನು. ನಿಶ್ಚಯಬುದ್ಧಿಯುಳ್ಳವನಾಗುತ್ತಾನೆ.

"ಅವನು ಬೇಗನೆ ಧರ್ಮಾತ್ಮನಾಗುತ್ತಾನೆ ಮತ್ತು ಶಾಶ್ವತ ವಾದ ಶಾಂತಿಯನ್ನು ಹೊಂದುತ್ತಾನೆ. ನನ್ನ ಭಕ್ತ ಎಂದಿಗೂ ನಾಶವಾಗುವುದಿಲ್ಲ".

ಎಂತಹ ದುರಾಚಾರಿಯಾಗಲಿ ದೇವರ ಸಮೀಪಕ್ಕೆ ಹೋಗು ವುದಕ್ಕೆ ಅವನಿಗೆ ಅಧಿಕಾರವಿದೆ. ದೇವರು ಕೇವಲ ಪುಣ್ಯಾತ್ಮರಿ ಗಾಗಿ ಮಾತ್ರ ಇಲ್ಲ. ಅವನು ಪುಣ್ಯಾತ್ಮರಿಗಿಂತ ಹೆಚ್ಚಾಗಿ ಪಾಪಿಗಳಿಗೆ ಬೇಕಾಗಿದೆ. ಯಾರು ಬೇಕಾದರೂ ತನ್ನ ಕಡೆಗೆ ಬನ್ನಿ, ತಾನು ಮೈಲಿಗೆಯಾಗುವುದಿಲ್ಲ ಎನ್ನುವನು. ಎಲ್ಲರಿಗೂ

ಒಂದು ಹಿಂದಿನ ಕೊಳಕು ಬಾಳು ಇದೆ. ಕೆಲವರಿಗೆ ಅದು ಗೊತ್ತಿದೆ, ಮತ್ತೆ ಕೆಲವರಿಗೆ ಅದು ಗೊತ್ತಿಲ್ಲ. ಗೊತ್ತಿಲ್ಲದೇ ಇದ್ದರೆ ಇಲ್ಲ ಎಂದು ಅರ್ಥವಲ್ಲ. ಇದ್ದರೆ ಅದಿದೆ ಎಂದು ನಿರಾಶರಾಗಿ ಕುಗ್ಗಿ ಹೋಗಿ ಕುಳಿತುಕೊಂಡು ಎಂದೆಂದಿಗೂ ಅಳುತ್ತಿರಬೇಕಾಗಿಲ್ಲ. ಅಜ್ಞಾನದಲ್ಲಿದ್ದಾಗ ತಪ್ಪುಮಾಡಿದೆವು: ಇನ್ನುಮೇಲೆ ಮಾಡುವುದಿಲ್ಲ. ಮಾಡಿರುವುದನ್ನು ಮರೆಯುತ್ತೇನೆ ಎಂದು ಅನನ್ಯಭಕ್ತಿಯಿಂದ ಭಗವಂತನೆಡೆಗೆ ಬಂದರೆ, ಅವನು ನಮ್ಮನ್ನು ಸ್ವೀಕರಿಸಲು ಸದಾ ಸಿದ್ಧನಾಗಿರುವನು. ಹೋಗುವುದಕ್ಕೆ ಅಂಜುವವರು ನಾವೆ. ನಾವೊಂದು ಅಡಿ ಅವನೆಡೆಗೆ ಹೋದರೆ ಅವನು ಹತ್ತು ಅಡಿ ನಮ್ಮೆಡೆಗೆ ಬರುವನೆಂಬುದು ಬರೀ ಮಾತಲ್ಲ. ಸಾಧುಸಂತರ ಜೀವನದ ಆಳದಿಂದ ಬಂದ ನುಡಿ ಇದು. ಅಕ್ಷರಶಃ ಸತ್ಯ. ಸಾಧನೆಯಿಂದ ಕಡೆದು ತೆಗೆದ ನವನೀತ ಇದು.

"ನನ್ನ ಭಕ್ತ ಎಂದಿಗೂ ನಾಶವಾಗುವುದಿಲ್ಲ" ಎಂಬ ಭರವಸೆಯನ್ನು ಕೃಷ್ಣ ಅರ್ಜುನನಿಗೆ ಕೊಡುವನು. ಇದು ದ್ವಾಪರ ಯುಗದಲ್ಲಿ ಬರೀ ಅರ್ಜುನನಿಗೆ ಕೊಟ್ಟ ಭರವಸೆ ಮಾತ್ರವಲ್ಲ. ಎಲ್ಲಾ ಜೀವಿಗಳ ರಥದ ಸಾರಥಿ ಶ್ರೀಕೃಷ್ಣ. ಇದು ಎಲ್ಲಾ ಕಾಲಕ್ಕೆ, ಎಲ್ಲಾ ದೇಶಕ್ಕೆ, ಎಲ್ಲಾ ಜೀವರಿಗೆ ಕೊಟ್ಟ ಭರವಸೆ. ಒಬ್ಬ ಯಾವ ಧರ್ಮವನ್ನಾದರೂ ಆಶ್ರಯಿಸಲಿ, ಯಾವ ತತ್ತ್ವವನ್ನಾದರೂ ಇಟ್ಟುಕೊಂಡಿರಲಿ, ದೇವರನ್ನು ಸಗುಣವಾಗಿ ಆರಾಧಿಸಲಿ ನಿರ್ಗುಣವಾಗಿ ಆರಾಧಿಸಲಿ ಚಿಂತೆಯಿಲ್ಲ. ಮುಖ್ಯವಾಗಿ ಬೇಕಾಗಿರುವುದು ಉದ್ಧಾರವಾಗಬೇಕು ಎಂಬ ಆಸಕ್ತಿ, ದೇವರು ನಮ್ಮನ್ನು ಉದ್ಧರಿಸುವನು ಎಂಬ ಶ್ರದ್ಧೆ. ಇದಿದ್ದರೆ ಕಾದುಕುಳಿತಿರುವನು ಅವನು ನಮ್ಮನ್ನು ಮೇಲೆತ್ತಿ ಚಿರಶಾಂತಿಯನ್ನು ನೀಡುವುದಕ್ಕೆ. ಈ ಭರವಸೆಯ ನಂದಾದೀವಿಗೆಯನ್ನು ಪ್ರತಿಯೊಂದು ಜೀವಿಯ ಹೃದಯಮಂದಿರದಲ್ಲಿ ಗೀತೆ ಬೆಳಗುವಂತೆ ಮಾಡುವುದು.

WO 21858—MUPM—10,000—9-12-80

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ : ೨೫ ಪೈಸೆಗಳು

೧. ಕುಮಾರ ವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ಟಿ. ಎನ್. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ಟಿ. ಎಸ್. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣ
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣ
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ॥ ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ
ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಕೃಷ್ಣಮೂರ್ತಿ
೩೪. ಜನ್ನ—ಡಾ॥ ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ॥ ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ॥ ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ॥ ಹಿರಣ್ಮಯ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ॥ ಆರ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಉ. ಕಾ. ಸುಬ್ಬರಾಯಾಚಾರ್
೫೬. ಶ್ರೀ ಸಮರ್ಥರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ